# ಪ್ರತಿಜ್ಞೆ



ಮೂಲ ಲೇಖಕರು
ದಿವಂಗತ ಪ್ರೇಮಚಂದರು

ಅನುವಾದಕರು
ರಾಮಲಿಂಗಯ್ಯನವರು




—48.

ವಸಂತ ಮಾಲಿಕೆ, ಮಂಗಳೂರು

ಸಾಹಿತ್ಯಕ್ಕೆ ಸಲಹೆಗಾರರು
ಶ್ರೀ. ಮುಳಿಯ ತಿಮ್ಮಪ್ಪಯ್ಯನವರು
ಶ್ರೀ. ಕಡೆಂಗೋಡ್ಲು ಶಂಕರ ಭಟ್ಟರು
ಶ್ರೀ. ಸೇಡಿಯಾಪು ಕೃಷ್ಣ ಭಟ್ಟರು

ಮಾಲಿಕೆಯ ಸಂಚಾಲಕರು
ವಸಂತ ಪ್ರೇಮಿ ಮಂಡಲಿ, ಮಂಗಳೂರು
ಅಧ್ಯಕ್ಷೆಯರು– ಕೆ. ರಾಧಾ ಎಲ್. ರಾವ್
ಕಾರ್ಯದರ್ಶಿನಿಯರು– ಕೆ. ಸುಂದರಿ

ಮಾಲಿಕೆಯ ಸಲಹೆಗಾರರು
ಶ್ರೀ. ಎಸ್. ಮುಕುಂದರಾಯರು
ಶ್ರೀ. ಪಿ. ಕೆ. ನಾರಾಯಣ, ಅವರು



ಸಂಪಾದಕರು
ಶ್ರೀನಿವಾಸ ಉಡುಪ



ಮಾರಾಟಗಾರರು
ಇಂಡಿಯನ್ ಇಂಡಸ್ಟ್ರಿಯಲ್ಸ್ ಎಂಡ್ ಏಜನ್ಸೀಸ್
ಪುಸ್ತಕ ವ್ಯಾಪಾರಿಗಳು
ಕಾರ್ನಾಡು ಸದಾಶಿವರಾಯರ ರಸ್ತೆ, ಮಂಗಳೂರು

ಮುದ್ರಕರು
ಶಾರದಾ ಛಾಪಖಾನೆ, ಮಂಗಳೂರು
(ಪುಸ್ತಕದ ರಕ್ಷಾಪತ್ರದ ಹೊರತು)
P. I. C. S. K.–22–3–48–1000

ಪ್ರಕಾಶಕರು
ವಸಂತ ಮಾಲಿಕೆ
ವಸಂತ ಪ್ರೇಮಿ ಮಂಡಲಿ
(ಬೆಸೆಂಟ್ ಬಾಲಿಕಾ ಪಾಠಶಾಲೆ)
ಕೊಡಿಯಾಲಬೈಲು, ಮಂಗಳೂರು

# ಪ್ರಸ್ತಾವ

ವಸಂತ ಮಾಲಿಕೆಯ ಮೂರನೆಯ ಕುಸುಮವಾದ "ಪ್ರತಿಜ್ಞೆ"ಯನ್ನು ನಿಮ್ಮ ಮುಂದಿಡಲು ಸಂತೋಷಪಡುತ್ತೇವೆ. ಈ ಕಾದಂಬರಿಗೆ ನಮ್ಮ ಮೊದಲ ವರ್ಷವು ಮುಗಿದಂತಾಯಿತು. ಮೊದಲನೆಯ ವರ್ಷದ ಮೂರು ಪುಸ್ತಕಗಳ ಒಟ್ಟು ಬೆಲೆಯು ರೂ. 3–8–0 ಆದರೂ, ಅಂಚೆಯ ವೆಚ್ಚವನ್ನು ಮಾಲಿಕೆಯೇ ವಹಿಸಿರುವುದರಿಂದ ನಾವು ಚಂದಾದಾರರಿಗೆ ಸುಮಾರು ರೂ. 4–8–0 ಯಷ್ಟು ಪ್ರತಿಫಲವನ್ನು ಕೊಟ್ಟಂತಾಯಿತು ಎಂದು ತಿಳಿಸಲು ಸಂತೋಷಪಡುತ್ತೇವೆ.

ಮಾಲಿಕೆಯ ಮೊದಲನೆಯ ವರ್ಷದಲ್ಲಿ ನೆರವಿತ್ತ ಲೇಖಕರಿಗೂ ಮತ್ತು ಗ್ರಾಹಕರಿಗೂ ನಾವು ಕೃತಜ್ಞರು.

ಈ ಕಾದಂಬರಿಯು ಸುಪ್ರಸಿದ್ಧ ಹಿಂದೀ ಕಾದಂಬರೀಕಾರರಾದ ದಿವಂಗತ ಪ್ರೇಮಚಂದರ "ಪ್ರತಿಜ್ಞಾ" ಎಂಬುದರ ಸಂಗ್ರಹಾನುವಾದ. ಇದನ್ನು ಶ್ರೀ. ರಾಮಲಿಂಗಯ್ಯನವರು ಕನ್ನಡಿಸಿ ಮಾಲಿಕೆಗೆ ಕೊಟ್ಟು ಸಹಕರಿಸಿದುದಕ್ಕಾಗಿ ನಾವು ಅವರಿಗೆ ಅನಂತ ವಂದನೆಗಳನ್ನರ್ಪಿಸುತ್ತೇವೆ.

ಪುಸ್ತಕ ಪ್ರಕಾಶನದಲ್ಲಿ ಶ್ರೀ. ಜಿ. ಕೆ. ಭಟ್ಟರು ಹಲಬಗೆಯಿಂದ ಸಹಾಯ ಮಾಡಿದ್ದಾರೆ. ಅವರಿಗೆ ನಾವು ಋಣಿಗಳು.

ಅಲ್ಪಾವಕಾಶದಲ್ಲೇ ಪುಸ್ತಕವನ್ನು ಸೊಗಸಾಗಿ ಮುದ್ರಿಸಿಕೊಟ್ಟ ಶಾರದಾ ಛಾಪಖಾನೆಯ ವ್ಯವಸ್ಥಾಪಕರಿಗೆ ನಮ್ಮ ಧನ್ಯವಾದಗಳು.

ಮುಂಧಿನ ವರುಷದ ಮೊದಲನೆಯ ಪುಸ್ತಕವಾಗಿ, ಕನ್ನಡನಾಡಿನ ಸುಪ್ರಸಿದ್ಧ ಸಾಹಿತಿಗಳಾದ ಶ್ರೀ. ಶಿವರಾಮ ಕಾರಂತರ "ದೇಹಜ್ಯೋತಿಗಳು ಮತ್ತು ಪ್ರಾಣಿಪ್ರಬಂಧಗಳು" ಎಂಬ ಪುಸ್ತಕವನ್ನು ಎಪ್ರಿಲ್ ತಿಂಗಳಲ್ಲಿ ಪ್ರಕಟಿಸುವೆವು. ಈ ವರ್ಷಕ್ಕಿಂತಲೂ ಹೆಚ್ಚಾಗಿ ಚಂದಾದಾರರು ನೆರವಾಗಬೇಕಾಗಿ ನಮ್ಮ ವಿನಯಪೂರ್ವಕ ವಿನಂತಿ.

ಬೆಸೆಂಟ್ ಶಾಲೆ
೯–೩–೪೮
(ಮಹಾಶಿವರಾತ್ರಿ)

ಸಂಪಾದಕ.

# ಪ್ರತಿಜ್ಞೆ

## ೧

ಕಾಶೀನಗರದ ಆರ್ಯಮಂದಿರದಲ್ಲಿ ಪಂಡಿತ ಅಮರನಾಥರ ಭಾಷಣವಾಗುತ್ತಿತ್ತು. ಶ್ರೋತೃವೃಂದವು ಮಂತ್ರಮುಗ್ಧರಂತೆ ಕುಳಿತು ಕೇಳುತ್ತಿತ್ತು.

ಪ್ರೊಫೆಸರ್ ದಾನಾನಾಥನು ತನ್ನ ಗೆಳೆಯ ಅಮೃತರಾಯನ ಕಿವಿಯಲ್ಲಿ "ಮಾತು ಬರೀ ಸಪ್ಪೆ!" ಎಂದನು.

ಅಮೃತರಾಯನು ಭಾಷಣ ಕೇಳುವುದರಲ್ಲಿ ತಲ್ಲೀನನಾಗಿದ್ದುದರಿಂದ ಏನೂ ಮಾತಾಡಲಿಲ್ಲ.

ಪುನಃ ದಾನಾನಾಥನು, "ಇಲ್ಲಿ ಕುಳಿತುಕೊಳ್ಳುವುದೇ ವ್ಯರ್ಥ. ಟೆನ್ನಿಸ್ ಆಡುವ ಸಮಯವೂ ಆಯಿತು" ಎಂದನು.

ಅಮೃತರಾಯನು ಮತ್ತೂ ಮಾತಾಡಲಿಲ್ಲ. ಒಂದು ಕ್ಷಣ ಬಿಟ್ಟು ದಾನಾನಾಥನು ಮತ್ತೆ "ನಾನು ಹೋಗುತ್ತೇನೆ" ಎಂದನು.

"ಹೋಗಬಹುದಲ್ಲ?"

"ನೀನೆಷ್ಟು ಸಮಯ ಇಲ್ಲಿರಬೇಕೆಂದಿರುವೆ?"

"ಮಾತು ಮುಗಿಯುವ ವರೆಗೆ."

"ಈ ಭಾಷಣದಲ್ಲೇನಿದೆ?"

"ನೀನು ಹೋಗು; ಬೇಡವೆನ್ನುವವರಾರು?"

"ಇವನು ಬೆಳಗು ವರೆಗೆ ಮಾತಾಡಿಯಾನು."

"ಅರೆ! ನೀನು ಹೋಗುವುದಾದರೆ ಹೋಗು. ಬೇರೆಯವರಿಗೆ ಉಪದ್ರವ ಕೊಡಬೇಡ."

"ಇಂದು ಪ್ರೇಮ ಕೂಡ ಆಡುವುದಕ್ಕೆ ಬಂದಾಳು."

"ನನಗೆ ಬರಲಾಗುವುದಿಲ್ಲವೆಂದು ಅವಳೊಡನೆ ಹೇಳಿಬಿಡು."

"ನನಗೇನಗತ್ಯ?"

"ಆಗಲಿ, ಹಾಗಾದರೆ ಸುಮ್ಮನಿರು."

ಅಷ್ಟು ಸುಲಭದಲ್ಲೇ ಸುಮ್ಮನಾಗುವ ವ್ಯಕ್ತಿಯಲ್ಲ ದಾನಾನಾಥ. ಆತ ಅಮರನಾಥನ ಕಡೆಗೆ ನೋಡತೊಡಗಿದ. ಅವನ ಗಡ್ಡವು ಇವನಿಗೆ ಆಕರ್ಷಕವಾಗಿ ಕಂಡಿತು. ಮಾತಾಡುವಾಗ ಅಲ್ಲಾಡುವ ಗಡ್ಡವು ವಿನೋದಾವಹವಾಗಿ ತೋರಿತು. ಇಂತಹ ಮನೋರಂಜಕ ದೃಶ್ಯವನ್ನು ಕಂಡು ಅವನು ಸುಮ್ಮನಿರಲಾರ. ಅಮೃತರಾಯನನ್ನು ತಿವಿದು, – "ಅವನ ಗಡ್ಡ ಎಷ್ಟು ಚಂದವಾಗಿದೆ! ಕೆರೆದು ಕಟ್ಟಿಕೊಳ್ಳುವನೋ ಎನಿಸುತ್ತದೆ" ಎಂದು ಉಪಕ್ರಮಿಸಿದನು.

ಅಮೃತರಾಯ– ನಿನಗೆ ಇಂತಹ ಸ್ಫೂರ್ತಿದಾಯಕ ಭಾಷಣ ಕೇಳುವ ಭಾಗ್ಯ ಬೇಡವೆ?

"ನಾನು ನಿಮ್ಮೆದುರಲ್ಲಿ ವ್ಯಾಖ್ಯಾನ ಕೊಡಲಿಕ್ಕೆ ಬಂದಿಲ್ಲ." ಭಾಷಣಕಾರ ಅಮರನಾಥರ ಮಾತಿದು.

ದಾನಾನಾಥ– (ಮೆಲ್ಲನೆ) ಮತ್ತೇಕೆ ಕುರಿಕಾಯಲಿಕ್ಕೆ ಬಂದುದೇ?

"ಮಾತೇ ಬಹಳ ಬೆಳೆದುಹೋಯಿತು. ಇನ್ನು ಕಾರ್ಯೋನ್ಮುಖರಾಗಬೇಕು." ಭಾಷಣಕಾರರು ಮುಂದುವರಿಸಿದರು.

ದಾನಾನಾಥ (ಮೆಲ್ಲನೆ) ಇನ್ನಾದರೂ ನಾಲಗೆಯನ್ನು ಬಿಗಿಹಿಡಿದುಕೊಳ್ಳಿ.

"ತಮ್ಮಲ್ಲಿ ಯಾರಾದರೂ ಪತ್ನೀವಿಯೋಗ ಹೊಂದಿದವರಿದ್ದರೆ ದಯಮಾಡಿ ಕೈಯೆತ್ತಿರಿ" ಎಂದರು ಪಂಡಿತರು.

ದಾನಾನಾಥ– ಬೇಜಾರು. ಇಲ್ಲಿ ಅಂಥವರು ಒಬ್ಬರಾದರೂ ಇಲ್ಲ.

"ಇಲ್ಲಿ ಕೂಡಿದವರಲ್ಲಿ, ವೈಧವ್ಯದ ಅಗ್ನಿಕುಂಡದಲ್ಲಿ ಬಿದ್ದಿರುವ ಅಬಲೆಯರನ್ನು ಉದ್ಧರಿಸುವವರಾರಾದರೂ ಇದ್ದರೆ, ದಯಮಾಡಿ ಕೈಯೆತ್ತಿರಿ. . . . . . ಎಲಾ, ಇದೇನು? ಒಬ್ಬೊಬ್ಬರಿಗೆ ಎರೆಡೆರಡು ಕೈಗಳಿದ್ದು ಮೇಲೆತ್ತಿದ ಕೈ ಒಂದಾದರೂ ಇಲ್ಲವೆಂದರೆ! ಏನು, ನಮ್ಮ ಯುವಕ ಸಮಾಜವು ಕರ್ತವ್ಯಶೂನ್ಯ – ಸಾಹಸ ಹೀನವಾಯಿತೆ? . . . . . ಇಲ್ಲ, ಅಲ್ಲಿ ನೋಡಿ; ಎತ್ತಿದ ಕೈಯೊಂದು ಯುವಕ ಸಮಾಜದ ನಕ್ಷತ್ರದಂತೆ ಇನ್ನೂ ಇದೆ. ಅದೇ ಬಾಬು ಅಮೃತರಾಯನ ಕೈ!" ಎಂದರು ಅಮರನಾಥರು; ಸ್ವಲ್ಪ ಸಮಾಧಾನದಿಂದ.

"ಇದೇನು ನಿನ್ನ ಕೆಲಸ? ಕೈ ಕೆಳಗೆ ಹಾಕು." ದಾನಾನಾಥನು ಅಮೃತರಾಯನಿಗೆಂದು ಕೈಹಿಡಿದೆಳೆಯಲು ಯತ್ನಿಸಿದನು.

ಕೈಯನ್ನು ಕೊಸರಿಕೊಳ್ಳುತ್ತಾ "ಮುಂದಿಟ್ಟ ಹಜ್ಜೆಯನ್ನು ಹಿಂದಿಡಲಾರೆ" ಎಂದು ಅಮೃತರಾಯನು ನಿರ್ಧಾರದ ಉತ್ತರವಿತ್ತನು.

"ಏನು ಇಷ್ಟು ವಿಸ್ತಾರವಾದ ಸಭೆಯಲ್ಲಿ ಒಂದೇ ಒಂದು ಕೈಯನ್ನು ಕಾಣುತ್ತಿರುವೆನು. ಇಷ್ಟು ದೊಡ್ಡ ಸಭೆಯಲ್ಲಿ ಹೃದಯವೆಂಬುದು ಒಂದೇ ಒಂದು; ಬೇರೆಲ್ಲಾ ಪಾಷಾಣಗಳು!" ಎಂದು ವಕ್ತಾರನ ಪಶ್ಚಾತ್ತಾಪದ ನುಡಿ.

"ನೀನೇಕೆ ಕೈಯೆತ್ತುವುದಿಲ್ಲ?" ಅಮೃತರಾಯನು ದಾನಾನಾಥ ನೊಡನೆ ಕೇಳಿದ.

"ನನ್ನಲ್ಲಿ ಆತ್ಮಾಭಿಮಾನಿಯಾಗುವ ಸಾಹಸವಿಲ್ಲ." ದಾನಾನಾಥನು ಉತ್ತರವಿತ್ತನು.

"ಇನ್ನು ಕೂಡ ಬೇರೆಯವರು ಕೈಯೆತ್ತಲಿಲ್ಲ. ತಂತಮ್ಮ ಇಷ್ಟ! ನಾನಾರನ್ನೂ ಒತ್ತಾಯಿಸುವುದಿಲ್ಲ. ಆದರೆ ನಾನು ಹೇಳಿದ ಮಾತುಗಳನ್ನು ಮರೆಯಕೂಡದೆಂದು ನಿಮ್ಮಲ್ಲಿ ಪ್ರಾರ್ಥಿಸುತ್ತೇನೆ. ಮತ್ತು ಬಾಬು ಅಮೃತ ರಾಯರ ಸಾಹಸಕ್ಕಾಗಿ ನಾನು ಸಂತೋಷಪಡುತ್ತೇನೆ." ಅಮರನಾಥರು ತಮ್ಮ ಭಾಷಣವನ್ನು ಮುಗಿಸಿದರು.

ಸಭೆಯು ವಿಸರ್ಜಿತವಾಯಿತು. ಎಲ್ಲರೂ ಅವರವರ ಮನೆಗಳಿಗೆ ಹೊರಟುಹೋದರು. ಪಂಡಿತ ಅಮರನಾಥರೂ ತೆರಳಿದ್ದರು. ಶೂನ್ಯ ಸಭಾಭವನದಲ್ಲಿ ಒಂದೇ ಒಂದು ವ್ಯಕ್ತಿ ಇನ್ನೂ ತಲೆತಗ್ಗಿಸಿ ಕುಳಿತಿದೆ. ಅದು ಮತ್ತಾರೂ ಅಲ್ಲ; ಅಮೃತರಾಯ. ದಾನಾನಾಥನು ಇಷ್ಟು ಸಮಯದ ವರೆಗೂ ಹೊರಗೆ ಕಾದುಕೊಂಡಿದ್ದವನು ಒಳಗೆ ಬಂದು, "ಇನ್ನಾದರೂ ಹೋಗಲಿದೆಯೆ?" ಎಂದು ಕೇಳಿದನು.

ಅಮೃತರಾಯನು ಬೆಚ್ಚಿಬಿದ್ದು, "ಹಾಂ, ನಡೆ" ಎಂದನು.

ಇಬ್ಬರೂ ಒಂದು ಜಟಕಾ ಬಂಡಿಯನ್ನೇರಿದರು. ಜಟಕಾ ಮುಂದೆ ಹೊರಟಿತು. ಮೆಲ್ಲಗೆ ದಾನಾನಾಥನು ಮಾತೆತ್ತಿದ: "ಇಂದು ನಿನಗೇನಾಗಿದೆ?"

"ನಿನಗೆ ಹೊಳೆಯದುದು."

"ಪ್ರೇಮ ಇಧನ್ನು ಕೇಳಿದರೆ ಏನೆಂದಾಳು?"

"ಸಂತೋಷಪಟ್ಟಾಳು. . . . . . ಸಂತೋಷವಾಗಲೇಬೇಕು. ತನ್ನ ಮಿತ್ರರು ಕರ್ತವ್ಯಬದ್ಧರಾದುದನ್ನು ತಿಳಿದರೆ ಯಾರಿಗೂ ಸಂತೋಷವಾಗದೆ?"

"ಸಂತೋಷಪಟ್ಟಾಳೆ? ಅವಳಿಗೆ ನಿನ್ನಲ್ಲಿ ಎಷ್ಟು ಪ್ರೀತಿಯಿದೆಯೆಂದು ನಿನಗೇ ಗೊತ್ತಿದೆ. ಅವಳಿಗೆ ಇನ್ನೂ ವಿವಾಹವಾಗದಿದ್ದರೂ, ಆಕೆ ನಿನ್ನ ಇಚ್ಛಿತ ವಧುವೆಂದು ನಗರಕ್ಕೆ ನಗರವೇ ತಿಳಿದಿದೆ. ನೀನು ಅವಳಿಗೆ ಎಷ್ಟೋ ಬಾರಿ ಪ್ರೇಮದ ಪತ್ರ ಬರೆಯಲಿಲ್ಲವೆ? ಮೂರು ವರ್ಷಗಳಿಂದ ನಿನ್ನ ಹೆಸ ರನ್ನೇ ನಂಬಿ ಕುಳಿತಿರುವಳು. ಅಂಥಾ ರತ್ನವು ನಿನಗೆ ಬೇರೊಂದು ದೊರಕೀತೆ?

ಒಂದು ವೇಳೆ ನೀನು ಅವಳನ್ನು ಮದುವೆಯಾಗದಿದ್ದರೆ ನಿನ್ನ ಜನ್ಮವೇ ವ್ಯರ್ಥ-ಕರ್ತವ್ಯವೆಂದು ನೀನು ಏನು ಮಾಡಿದರೂ, ಅವಳನ್ನು ತ್ಯಜಿಸಲಾರೆ."

"ಇದೆಲ್ಲಾ ನನಗೆ ಗೊತ್ತು. ಆದರೆ ನನಗೆ ಅವಳನ್ನು ಮದುವೆಯಾಗುವ ಅಧಿಕಾರವೆಲ್ಲಿದೆ? ಪಂಡಿತ ಅಮರನಾಥರ ಉಪದೇಶವು ನನ್ನ ಹೃದಯದಲ್ಲಿ ನಾಟಿ ಬೇರೂರಿಬಿಟ್ಟಿದೆ" ಎಂದು ಸಮಾಧಾನದಿಂದೆಂದ ಅಮೃತರಾಯ.

ದಾನಾನಾಥನು ತುಚ್ಛೀಕಾರದಿಂದ "ಒಳ್ಳೆಯ ಉಪದೇಶ. ನಾಡಾಡಿ ಏನಾದರೂ ಹೇಳಿದರೆ, ನೀನೊಬ್ಬ ಕೇಳಿಕೊಳ್ಳಬೇಕು. ಪ್ರಥಮ ಪತ್ನಿಯು ಮಡಿದರೆ, ಪುನಃ ಮದುವೆಯಾಗುವುದಾದರೆ ವಿಧವೆಯನ್ನೇ ಆಗಬೇಕೆಂಬುದು ಯಾವ ನ್ಯಾಯ?" ಎಂದನು.

"ನ್ಯಾಯವಲ್ಲದೆ ಮತ್ತೇನು?"

"ಸರಿ. ನಿನ್ನ ಸಿದ್ಧಾಂತ ಪ್ರಕಾರ ನಡೆದರೆ ಲೋಕೋದ್ಧಾರಕ್ಕೆ ಹೆಚ್ಚು ಸಮಯವೇ ಬೇಡ. ಆದರೆ, ನೀನೊಬ್ಬನೆ ಹೀಗೆ ಮಾಡಿದರೆ ಉದ್ಧಾರವಾಗುವ ಬದಲು ನಿನಗೇ ಅಪಕೀರ್ತಿ ಬಂದೀತು" ಎಂದು ಎಚ್ಚರಿಸಿದ ದಾನಾನಾಥ.

ಅಮೃತರಾಯನು ಸಗರ್ವ ನೇತ್ರಗಳಿಂದ ಗೆಳೆಯನನ್ನು ನೋಡುತ್ತಾ "ಒಬ್ಬನೇ ಏಕೆ ಮಾಡಲಾರ? ಒಬ್ಬನಾಗಿಯೇ ಇದ್ದವನು ಕ್ರಾಂತಿಯನ್ನುಂಟು ಮಾಡಿದವನಿಲ್ಲವೆ? ಚರಿತ್ರೆಯೇ ಒಬ್ಬೊಬ್ಬರಿಂದ ತುಂಬಿಹೋದುದು ನಿನಗೆ ತಿಳಿಯದೆ? ಗೌತಮ ಬುದ್ಧರೆಷ್ಟು ಮಂದಿಯಿದ್ದರು? ಅವನೊಬ್ಬನೇ ತನ್ನ ವಿಚಾರಪಥದಲ್ಲಿ ಮುನ್ನಡೆದು, ಉಪದೇಶಿಸಲಿಲ್ಲವೆ? ಅರ್ಧ ಜಗತ್ತೇ ಆತನ ಚರಣಧೂಳಿಯನ್ನು ಆಶಿಸುತ್ತಿದ್ದಿಲ್ಲವೆ? ಒಬ್ಬೊಬ್ಬರಿಂದಲೇ ರಾಷ್ಟ್ರಗಳು ಹುಟ್ಟಿವೆ; ರಾಷ್ಟ್ರಗಳು ನಷ್ಟಹೊಂದಿವೆ. ಇಂದು ಅವುಗಳ ಅವಶೇಷ ಕೂಡಾ ಇಲ್ಲವಾದರೂ ಒಬ್ಬೊಬ್ಬರ ಹೆಸರೂ ಚಕಚಕಿಸುತ್ತವೆ. ನಾನು ಒಬ್ಬನಾಗಿ ಏನೂ ಮಾಡಲಾರೆನೆ? ಸಂಘದಿಂದಲೂ ಏನೂ ಮಾಡಲು ಸಾಧ್ಯವಿಲ್ಲ. ಎಷ್ಟೋ ಸಂಘಗಳು ಸಂಘಟಿಸಿದರೂ ಏನೂ ಮಾಡಲು ಸಾಧ್ಯವಿಲ್ಲ. ಅದನ್ನೆಲ್ಲಾ ನಾನು ವಿಚಾರಿಸುವುದಿಲ್ಲ. ನನ್ನ ಪಥದಲ್ಲಿ ನನಗೆ ಹಜ್ಜೆಯಿಟ್ಟಾಗಿ ಹೋಯಿತು" ಎಂದನು.

ದಾನಾನಾಥನೊಬ್ಬ ಸರಳ ಸ್ವಭಾವದ ಮನುಷ್ಯನಾಗಿದ್ದ. ಅವನ ಮಾರ್ಗವೂ ಸರಳವಾಗಿತ್ತು. ಯಾವುದಾದರೂ ಸಿದ್ಧಾಂತ ಅಥವಾ ಆದರ್ಶ ಮಾರ್ಗ ಹಿಡಿಯುವುದು ಅವನಿಂದಾಗುತ್ತಿರಲಿಲ್ಲ. ಅವನೊಬ್ಬ ಕಾಲೇಜಿನ

ಅಧ್ಯಾಪಕ. ಕೆಲಸದ ಸಮಯ ಕಳೆದ ಮೇಲೆ ಕಾಲಿನ ಧೂಳು ಬಟ್ಟೆಗೆ ಹಿಡಿಯದಷ್ಟು ಮೃದುವಾಗಿ ತಿರುಗಾಡುವುದರಲ್ಲೊ, ಸ್ನೇಹಿತರೊಡನೆ ತಮಾಷೆ ಮಾತಾಡುವುದರಲ್ಲೊ ದಿನಗಳೆಯುತ್ತಿದ್ದ. ಇಂತಹ ಕಠಿನ ಮಾರ್ಗದ ಅವಶ್ಯಕತೆಯು ಅವನಿಗಿದ್ದಿಲ್ಲ.

ಅಮೃತರಾಯನು ಆದರ್ಶವಾದಿಯಾಗಿದ್ದ. ಅಲ್ಲದೆ ಸಂಯಮಿ. ಯಾವ ಕಾರ್ಯವನ್ನೂ ನಿಯಮವಿರುದ್ಧವಾಗಿ ಮಾಡುತ್ತಿದ್ದಿಲ್ಲ. ಜೀವನದ ಸದ್ವಿನಿಯೋಗವು ಹೇಗಾಗುವುದು ಎಂಬುದೇ ಅವನ ಯೋಚನೆ. ಒಮ್ಮೆ ಒಂದು ಕಾರ್ಯವನ್ನು ನಿಶ್ಚಯಿಸಿದನೆಂದರೆ, ತೀರಿತು; ಅದನ್ನು ಪೂರೈಸದೆ ನಿವೃತ್ತನಾಗುತ್ತಿರಲಿಲ್ಲ. ವಕೀಲನಾಗಿದ್ದರೂ ಅದರಲ್ಲಿ ತೃಪ್ತಿಯಿದ್ದಿಲ್ಲ. ಆದರೂ ಯಾವುದಾದರೂ ಪಕ್ಷವನ್ನು ವಹಿಸಿದರೆ, ಅದರ ವಿಚಾರದಲ್ಲೇ ಅಹೋರಾತ್ರಿ ಕಳೆಯುತ್ತಿದ್ದ. ಅವನಿಗೆ ಯಾವ ವ್ಯಸನವೂ ಇದ್ದಿಲ್ಲ. ಆದುದರಿಂದ ರುಸುಂ ಕಡಮೆಯಾದರೂ ತೃಪ್ತನಾಗುತ್ತಿದ್ದ; ಕೊಡದಿದ್ದರೂ ಕೇಳುವಂತಿಲ್ಲ. ಅವನ ಪ್ರಥಮ ವಿವಾಹವು ಅವನ ವಿದ್ಯಾರ್ಥಿ ದಶೆಯಲ್ಲೇ ಆಗಿತ್ತು. ಆದರೆ ಅವನ ಪತ್ನಿಯು ಪರಲೋಕಕ್ಕೆ ತೆರಳಿ ಕೆಲವು ಕಾಲವಾಗಿತ್ತು. ಅವನ ತಂಗಿಯ ವಿವಾಹವಾದ ಕೆಲವೇ ದಿನಗಳಲ್ಲಿ ತಂದೆ ತಾಯಂದಿರು ವಾಂತಿಭೇದಿಯಿಂದ ತೀರಿಕೊಂಡರು. ಈ ಎಲ್ಲಾ ದುಃಖದಿಂದಾಗಿ ಎರಡು ವರ್ಷಗಳ ಕಾಲ ದೇಶಾಟನೆಯಲ್ಲಿದ್ದ. ಕಡೆಗೆ ಊರಿಗೆ ಬಂದಾಗ ಹೋಳಿ ಹಬ್ಬವಾದುದರಿಂದ ತನ್ನ ಮಾವನ ಆಮಂತ್ರಣ ಬಂದುದರಿಂದ ಅಲ್ಲಿಗೆ ಭೋಜನಕ್ಕೆ ಹೋಗಿದ್ದ. ಅವನ ಮಾವನ ಮನದಿಚ್ಛೆಯು ಬೇರೊಂದಿತ್ತು. ತನ್ನ ಪುತ್ರಿ ಪ್ರೇಮ ಕುಮಾರಿಗೆ ತಕ್ಕ ವರನು ಇವನೆಂದು ತಿಳಿದು, ಅವರಿಬ್ಬರ ಪರಸ್ಪರ ದರ್ಶನದ ಯೋಗಕ್ಕಾಗಿ ಹೋಳಿಯ ನೆವವನ್ನಿಟ್ಟಿದ್ದನು. ಎರಡು ವರ್ಷಗಳ ಹಿಂದೆ ಅವಳನ್ನು ಅಮೃತರಾಯನು ನೋಡಿದ್ದನು. ಅಂದು ಅವಳು ಮೊಗ್ಗೆಯಾಗಿದ್ದರೆ, ಇಂದು ವಿಕಸಿತ ಕುಸುಮ. ಅವನ ಹೃದಯದಲ್ಲಿ ಪ್ರೇಮ ಕುಮಾರಿಯ ಪ್ರೇಮವುತ್ಪತ್ತಿಯಾಯಿತು. ಕಡೆಗೆ ಅವನ ಮಾವನು ಮದುವೆಯ ಪ್ರಸ್ತಾಪವನ್ನೆತ್ತಿದ್ದನು. ಕುರುಡನಿಗೆ ದೃಷ್ಟಿ ಬಂದಂತಾಯಿತು ಅಮೃತರಾಯನ ಸ್ಥಿತಿ. ಇದೇ ತಿಂಗಳಲ್ಲಿ ಮದುವೆಯೆಂದು ನಿಶ್ಚಯವೂ ಆಗಿಬಿಟ್ಟಿದೆ. ಆದರೆ ಅಮೃತರಾಯನು ಇದೊಂದು ಪ್ರತಿಜ್ಞೆಯನ್ನು ಮಾಡಿಬಿಟ್ಟ.

ಅಮೃತರಾಯನ ದೀರ್ಘ ತರ್ಕವನ್ನು ಕೇಳಿದ ಮೇಲೆ ದಾನಾನಾಥ "ನೀನು ನಿರ್ಧಾರವನ್ನೇ ಮಾಡಿದೆಯಾ?" ಎಂದನು.

"ಹೂಂ."

"ಪ್ರೇಮ?"

"ಅವಳಿಗೆ ನನಗಿಂತಲೂ ಮಿಗಿಲಾದ ವರನು ಸಿಗಲಾರನೆ?" ಎಂದ ಅಮೃತರಾಯ.

ದಾನಾನಾಥನು ಸಿಟ್ಟಿನಿಂದ "ಏನು ಮಾತಾಡುತ್ತಿರುವೆ? ಪ್ರೇಮ ಕುಮಾರಿಯೆಂದರೆ ಅಂಗಡಿಯಲ್ಲಿ ಮಾರಾಟಕ್ಕಿಟ್ಟ ವಸ್ತುವೆಂದು ತಿಳಿದೆಯಾ? ಒಂದು ವಸ್ತು ಮನಸ್ಸಿಗೊಪ್ಪದಿದ್ದರೆ ಇನ್ನೊಂದನ್ನು ಕೊಳ್ಳುವ ಯೋಚನೆಯೆ? ಪ್ರೇಮಾ ನಿನ್ನ ಭಾವೀ ಪತ್ನಿ ಮಾತ್ರವಲ್ಲ; ನಿನ್ನ ಪ್ರೇಮಪಾತ್ರಳೂ ಆಗಿದ್ದಾಳೆ. ನಿನ್ನ ಈ ನಿರ್ಧಾರವು ಆಕೆಗೆ ತಿಳಿದರೆ, ಅವಳ ಹೃದಯವು ಭಸ್ಮವಾದೀತು. ಅವಳ ಗತಿಯೇನಾದೀತೆಂದು ಹೇಳಲು ಸಾಧ್ಯವಿಲ್ಲ. . . . . ನೀನವಳಿಗೆ ಅನ್ಯಾಯ ಮಾಡುತ್ತಿರುವೆ, ಅಮೃತರಾಯ" ಎಂದು ಉತ್ತರವಿತ್ತ.

ಅಮೃತರಾಯನು ವಿಚಾರಮಗ್ನನಾದನು. ತನ್ನ ವಿಷಯ ಇನ್ನು ಚಿಂತಿಸುವ ಅಗತ್ಯವಿಲ್ಲ. ಅದನ್ನು ಮೊದಲೇ ತರ್ಕಿಸಿ ಕರ್ತವ್ಯದಲ್ಲಿ ಧುಮುಕಿರುತ್ತಾನೆ. ತನ್ನ ಕರ್ತವ್ಯಪಥದಲ್ಲಿ ಮುಂದುವರಿಯುವಾಗ ಉಂಟಾಗುವ ವ್ಯಥೆಯನ್ನು ಅವನು ಸಹಿಸಲು ಸಿದ್ಧನಾಗಿದ್ದನು. ಆದರೆ ಪ್ರೇಮ ಕುಮಾರಿಯ ಅವಸ್ಥೆಯೇನಾಗಬಹುದು? ಅದು ಈ ವರೆಗೂ ಅವನ ಮನಸ್ಸಿಗೆ ಹೊಳೆದಿರಲಿಲ್ಲ. ಪ್ರೇಮಾ ಎಂತಹ ವಿಚಾರಶೀಲೆ ಯೆಂಬುದು ಅವನಿಗೆ ಗೊತ್ತಿತ್ತು. ತನ್ನ ಸತ್ಕಾರ್ಯಕ್ಕಾಗಿ ಅವಳು ಆನಂದ ಪಡೆದಿರಳು; ನಿಶ್ಚಯವಾಗಿಯೂ ಆಕೆಗೆ ದುಃಖವಾಗದು. — "ದಾನಾನಾಥ, ನಾನು ಗ್ರಹಿಸುವಷ್ಟು ಅವಳಿಗೆ ಮೇಧಾಶಕ್ತಿಯಿದ್ದರೆ ಅವಳಿಗೆ ನನ್ನ ವರ್ತನೆ ಯಿಂದ ದುಃಖವಾಗದು. ಇದರಿಂದ ಅವಳಿಗೆ ಸಂತೋಷವೇ ಉಂಟಾದೀತು" ಎಂದು ಅಮೃತರಾಯನು ನುಡಿದನು.

ದಾನಾನಾಥನು "ನಿನ್ನ ಆಲೋಚನೆಯ ಪ್ರಕಾರ, ನೀನು ಸಮರದಲ್ಲಿ ವಿಜಯಶಾಲಿಯಾಗಿ ಬಂದಾತ; ನಿನ್ನ ಹೆಸರನ್ನು ಕೇಳಿದವರು ನಿನ್ನನ್ನು ಪುಷ್ಪಹಾರಗಳಿಂದ ಅಲಂಕರಿಸಿ ಸತ್ಕರಿಸಲು ಉತ್ಸುಕರಾಗಬಹುದು ಎಂದು ತಿಳಿದಿರುವೆಯಾ? ಆದರೆ ನೀನು ಸನಾತನ ಧರ್ಮವನ್ನು ಭ್ರಷ್ಟಗೊಳಿಸುತ್ತಿರುವೆ, ಎಂದೇ ನನ್ನ ಮತ. ನೀನು ಹೆಸರಿಗಾಗಿ ಚಡಪಡಿಸುತ್ತಿರುವೆ. ಸಮಾಚಾರ ಪತ್ರಗಳಲ್ಲಿ ದೊಡ್ಡ ಅಕ್ಷರಗಳಲ್ಲಿ ನಿನ್ನ ಹೆಸರು ಮುದ್ರಿತವಾಗ ಬೇಕೆಂದು ನಿನ್ನ ಬಯಕೆ. 'ಹೆಸರು' ಪಡೆಯಬೇಕಾದರೆ ಇದು ಒಳ್ಳೆಯ ಉಪಾಯ. ಆದರೆ ರಮಣಿಯರು 'ಹೆಸರ'ನ್ನು ಮಾತ್ರ ಪ್ರೀತಿಸುವುದಲ್ಲ.

ಪ್ರೇಮ ಕುಮಾರಿಯು ಎಷ್ಟೇ ವಿಚಾರಶೀಲೆಯಾದರೂ ತನ್ನ ಹೃದಯವನ್ನೇ ಕೀಳುವಂತಹ 'ಹೆಸರ'ನ್ನು ಪ್ರೀತಿಸಲಾರಳು. ಅವಳ ಜೀವನವು ದುಃಖ ಮಯವಾದೀತು" ಎಂದು ತಿರಸ್ಕಾರಭಾವದಿಂದ ಗೆಳೆಯನಿಗೆಂದುಬಿಟ್ಟನು.

ಅಮೃತರಾಯನ ಮನೆ ಬಂತು. ಇಬ್ಬರೂ ಗಾಡಿಯಿಂದ ಕೆಳಗಿಳಿದರು. ಅಮೃತರಾಯನು ತನ್ನ ಕೋಣೆಗೆ ನಡೆದನು. ಅಮೃತರಾಯನು ತನ್ನನ್ನು ಒಳಗೆ ಕರೆದಾನು ಎಂದು ಭಾವಿಸಿ ದಾನಾನಾಥನು ಹೊಗಗೆಯೇ ನಿಂತನು. ಅಮೃತರಾಯನು ಮಾತಾಡಿಸದೆಯೇ ಒಳಗೆ ಹೋದುದನ್ನು ಕಂಡು, ಅವನ ಕೋಣೆಯ ಬಳಿಗೆ ಹೋಗಿ — "ಏನು ನನ್ನಲ್ಲಿ ಕೋಪಗೊಂಡೆಯಾ?" ಎಂದು ಕೇಳಿದನು.

ಅಮೃತರಾಯನು ಸಜಲನೇತ್ರಗಳಿಂದ ನೋಡಿ "ಇಲ್ಲ, ನೀನು ಹೇಳಿದುದೆಲ್ಲವೂ ನನ್ನ ಮೇಲಿನ ಸ್ನೇಹಭಾವದಿಂದ ಎಂದು ನಾನು ಬಲ್ಲೆ. ನೀನು ಪ್ರಕಟವಾಗಿ ಏನೆಂದರೂ, ಮನಸ್ಸಿನಲ್ಲಿ ನಾನು ಹೆಸರಿಗಾಗಿ ಮಾಡುವುದಲ್ಲ, ಕಾರ್ಯಪ್ರಿಯನೆಂದು ತಿಳಿದಿರುವೆ, ಎಂಬುದನ್ನೂ ನಾನು ಬಲ್ಲೆನು" ಎಂದನು.

ದಾನಾನಾಥನು ಸ್ನೇಹದಿಂದ ಅಮೃತರಾಯನ ಕೈಗಳನ್ನು ಹಿಡಿದುಕೊಂಡು — "ಇನ್ನೊಮ್ಮೆ ಆಲೋಚಿಸಿ ನೋಡು. ಇಲ್ಲವಾದರೆ ಮುಂದೆ ಪಶ್ಚಾತ್ತಾಪಪಡಬೇಕಾದೀತು" ಎಂದೆಚ್ಚರಿಸಿದನು.

ಅಮೃತರಾಯ ಕುರ್ಚಿಯಲ್ಲಿ ಕುಳಿತುಕೊಳ್ಳುತ್ತಾ ಹೇಳಿದ:— "ಇನ್ನೊಮ್ಮೆ ಆಲೋಚನೆಯೇ ಇಲ್ಲ. ಪಶ್ಚಾತ್ತಾಪದ ಮಾತೆಲ್ಲಿ ಮತ್ತೆ? ಇಂದು ನನಗೆಷ್ಟರ ಆನಂದವಾಗುತ್ತಿದೆ! ಇಂತಹ ಆನಂದವು ಈ ವರೆಗೂ ದೊರೆತಿರಲಾರದು. ಎಷ್ಟೋ ಕಾಲಗಳ ಮನಸ್ಸಂಗ್ರಾಮದದಿಂದ ದೊರಕಿದ ವಿಜಯವಿಂದು. ನನಗೆಷ್ಟು ಪ್ರೇಮಕುಮಾರಿಯಲ್ಲಿ ಪ್ರೇಮವಿದೆಯೋ, ಅದಕ್ಕಿಂತಲೂ ಇಮ್ಮಡಿ ಅವಳನ್ನು ಪ್ರೀತಿಸುವ ನನ್ನ ಗೆಳೆಯನೊಬ್ಬನಿದ್ದಾನೆ. ಆದರೆ ಅದನ್ನೆಂದೂ ಅವನು ಪ್ರಕಟಿಸಲಿ ಅವನ ಹೃದಯವು ರಾತ್ರಿ ಹಗಲು ದಹಿಸುತ್ತಿದೆಯೆಂದೂ ನನಗೆ ಗೊತ್ತು. ಇಂದಿನ ವರೆಗೂ ಅವನು ಯಾವ ತರದ ನಿರಾಶೆಯ ಏಟನ್ನೂ ತಿಂದವನಲ್ಲ . . . . ."

ಅಮೃತರಾಯನ ಪ್ರಮೃತಪತ್ನಿಯು ಜೀವಂತಳಾಗಿದ್ದಾಗ ಪ್ರೇಮ ಕುಮಾರಿಯ ವಿವಾಹವು ದಾನಾನಾಥನೊಡನೆ ಆಗುವ ಪ್ರಸ್ತಾಪವು ನಡೆದಿತ್ತು. ಅಮೃತರಾಯನು ವಿಧುರನಾದ ಬಳಿಕ ಪ್ರೇಮಕುಮಾರಿಯ ತಂದೆ ಲಾಲಾ ಬದರೀಪ್ರಸಾದನು ದಾನಾನಾಥನಿಗಿಂತ ಅಮೃತರಾಯನೇ ತನ್ನ

ಮಗಳಿಗೆ ತಕ್ಕ ವರನೆಂದು ಗ್ರಹಿಸಿದನು. ದಾನಾನಾಥನು ಸಂಪತ್ತು, ವಿದ್ಯೆ, ಪ್ರತಿಷ್ಠೆಗಳಲ್ಲಿ ಅಮೃತರಾಯನ ಜೋಡಿಯಲ್ಲ. ಇದಕ್ಕಿಂತಲೂ ಹೆಚ್ಚಿನ ಕಾರಣವೆಂದರೆ ಪ್ರೇಮಕುಮಾರಿಯ ದೃಷ್ಟಿ ಅಮೃತರಾಯನ ಕಡೆಗೆ ಹರಿದಿದೆ ಯೆಂಬುದು. ಹೀಗೆಲ್ಲಾ ಆದಮೇಲೆ ದಾನಾನಾಥ ವಿವಾಹವಾಗದೆಯೇ ತನ್ನ ಜೀವನವನ್ನು ಕಳೆಯುವೆನೆಂದು ನಿರ್ಧರಿಸಿದ. ದಾನಾನಾಥನು ಬಹಿ ರಂಗದಲ್ಲಿ ಸಂತೋಷಿಯಾಗಿದ್ದರೂ, ಅಂತರಂಗದಲ್ಲಿ ನಿತ್ಯ ದುಃಖವನ್ನು ಅನುಭವಿಸುತ್ತಿದ್ದನು. ತನ್ನ ಪರಮಮಿತ್ರನ ದುಃಖವು ಅಮೃತರಾಯನಿಗೆ ತಿಳಿಯದೆ ಇದ್ದಿಲ್ಲ. ಆದರೆ ಅವಳಂತಹ ಅನುಪಮ ಸುಂದರಿಯನ್ನು ತ್ಯಜಿಸುವುದು ಸುಲಭದ ಕಾರ್ಯವಲ್ಲ. ಆದರೆ ಇಂದು ಅಮೃತರಾಯನ ಈ ಮಹಾತ್ಯಾಗವನ್ನು ನೋಡಿ ದಾನಾನಾಥನು ಪುಳಕಿತನಾದನು. ಯಾವ ಆಶೆಯನ್ನು ತ್ಯಜಿಸಬೇಕಾದರೆ ತನ್ನ ಹೃದಯವನ್ನೇ ಕೀಳಬೇಕಾಯಿತೋ, ಯಾವ ಅಂತಿಮ ಆಶಾಜ್ಯೋತಿಯು ನಂದಿ ಅನೇಕ ಕಾಲ ಸಂದುಹೋ ಯಿತೋ ಅದೇ ಆಶೆಯು ಇಂದು ಅವನ ಮರ್ಮಸ್ಥಳದಲ್ಲಿ ನರ್ತಿಸಲಾರಂಭಿ ಸಿತು. ಅಮೃತರಾಯನು ದೇವೋಪಮನಾಗಿ ಕಂಡುಬಂದನು. ಅವನು ಗದ್ಗದ ಕಂಠದಿಂದ ಹೇಳಲಾರಂಭಿಸಿದ "ಏನು, ನಿಜವಾಗಿಯೂ ಈ ವಿಚಾರ ದಲ್ಲಿ ನೀನು ಪಣತೊಟ್ಟೆಯಾ? ಆದರೆ, ಇದರಿಂದಾಗಿ ನಿನ್ನ ಮಿತ್ರನು ಆಕೆ ಯನ್ನು ಪಡೆದರೆ, ಅವನು ಮಿತ್ರನಲ್ಲ, ಶತ್ರು. ಪ್ರೇಮಕುಮಾರಿಯ ವಿವಾ ಹವು ನಿನ್ನ ಆ ಮಿತ್ರನೊಡನೆ ಆಗುವುದು ನಿಶ್ಚಯವೇನು . . . . ?"

ಅಮೃತರಾಯನು ಚಿಂತಿತನಾಗಿ "ಈ ಶಂಕೆಯು ಸಹಜವಾದುದೇ! ಆದರೆ ನನ್ನ ಗೆಳೆಯನು ಈ ಸುಸಂಧಿಯನ್ನು ಕಳೆದುಕೊಳ್ಳನೆಂದೇ ನನಗನಿಸು ತ್ತದೆ" ಎಂದುಸುರಿದನು.

ದಾನಾನಾಥನು ತಿರಸ್ಕಾರಭಾರವನ್ನು ತೋರಿಸಿಕೊಂಡು: "ನೀನು ಅವನನ್ನು ಇಷ್ಟು ನೀಚನೆಂದು ತಿಳಿಯುವುದಾದರೆ, ತಿಳಿ. ಆದರೆ, ಅವನು ನಿನಗೆ ನಿರಾಶೆಯ ಕಾಣಿಕೆಯನ್ನು ಕೊಟ್ಟಾನೆಂದು ನಾನು ನಂಬಲಾರೆ." ಎಂದು ಹೇಳುತ್ತಾ ಹೊರಗೆ ಹೋದನು.

ಅಮೃತರಾಯನು ಬಾಗಿಲಲ್ಲಿ ನಿಂತುಕೊಂಡು, ಅವನನ್ನು ತಡೆಯ ಬೇಕೆಂಬ ಅಪೇಕ್ಷೆಯಿದ್ದರೂ, ತಡೆಯಲು ಸಮರ್ಥನಾಗಲಿಲ್ಲ.

---

೨

ಲಾಲಾ ಬದರೀಪ್ರಸಾದನ ಮನೆಯ ಚಿತ್ರವು, ಯಾರಾದರೂ ಮರಣ ಹೊಂದಿದುದಕ್ಕಾಗಿ ಇವರೆಲ್ಲರೂ ಶೋಕಿಸುತ್ತಾರೊ ಎಂಬಂತೆ ಕಾಣುತ್ತಿತ್ತು. ಬದರೀಪ್ರಸಾದ, ಅವನ ಪತ್ನಿ ದೇವಕಿ ನಿಶ್ಚಲನೇತ್ರಗಳಿಂದ ನೆಲವನ್ನೇ ನೋಡುತ್ತಿದ್ದರು. ಕಡೆಗೆ ದೇವಕಿ "ನೀವು ಅಮೃತರಾಯನನ್ನೊಮ್ಮೆ ಕಂಡರೇನು?" ಎಂದಳು.

"ಕಂಡು ಮಾಡುವುದೇನು?"

"ಕಂಡು ಅವನಿಗೇನಾದರೂ ಸಮಾಧಾನದ ಮಾತನ್ನು ಹೇಳುವುದು, ಮತ್ತೇನು ಮಾಡುವುದು? 'ನಮ್ಮ ಕಿರುದೋಣಿಯನ್ನು ಮಧ್ಯಪ್ರವಾಹದಲ್ಲಿ ಮುಳುಗಿಸುವುದೇಕೆ? ನೀನು ನಮ್ಮ ಹುಡುಗನೇ ಆಗಿದ್ದೆ, ಹೀಗೆ ಮಾಡುವೆಯೆಂದು ಗ್ರಹಿಸಿರಲಿಲ್ಲ' ಎಂದು ಹೇಳಿನೋಡಿ."

"ನಾನೀಗ ಅವನ ಬಳಿಗೆ ಹೋಗಲಾರೆ."

"ಅದೇನು?"

ಬದರೀಪ್ರಸಾದನಿಗೆ ಸಿಟ್ಟೇರಿತು. "ನಿನ್ನಲ್ಲಿ ಹೇಳುವುದೇನು? ಅವನ ವಿಚಾರವು ತಿಳಿದ ಬಳಿಕ, ಅವನ ಬಳಿಗೆ ಹೋಗುವುದು ಅನುಚಿತ, ಮಾತ್ರವಲ್ಲ ಅಪಮಾನ ಎಂದೇ ತಿಳಿಯುತ್ತೇನೆ. ಹಿಂದೂ ಮುಸಲ್ಮಾನರ ಧಾರ್ಮಿಕ ವಿಚಾರಗಳಲ್ಲಿ ಅಂತರವಿದೆ. ಆದರೆ ಮನುಷ್ಯನೊಬ್ಬನಲ್ಲಿ ವಿವೇಕವೆಂಬುದೇ ನಿರಂತರವಾಗಿ ಇರಬೇಕಾದುದು ಅವನಂತೂ ವಿಧವಾವಿವಾಹದ ಸಮರ್ಥಕ; ಅದರಿಂದಲೇ ರಾಷ್ಟ್ರೋನ್ನತಿ ಎಂದು ತಿಳಿಯುತ್ತಾನೆ. ಆದರೆ ಇದರಿಂದ ಹಿಂದೂ ಧರ್ಮವು ನಾಶವಾಗುತ್ತದೆ ಎಂದು ನನ್ನೆಣಿಕೆ. ನಮ್ಮ ಸಮಾಜವೇ ಇದರಿಂದಾಗಿ ಅಧೋಗತಿಗಿಳಿದೀತೆಂದು ನನ್ನ ಗ್ರಹಿಕೆ. ಅವನ ಆ ಪ್ರತಿಜ್ಞೆಯೇ ಅವನನ್ನು ಸಮಾಜದಿಂದ ಹೊರಗೆ ಹಾಕಿತು. ಇನ್ನು ನಮಗೂ ಅವನಿಗೂ ಎಲ್ಲಿಯ ಸಂಪರ್ಕ?" ಎಂದನು.

ದೇವಕಿಯು ಇದೊಂದಷ್ಟು ಮಹತ್ವದ ವಿಷಯವಲ್ಲವೆಂಬ ಭಾವನೆಯಿಂದ, "ಇದೇನು ಮಹಾವಿಷಯ? ಇಂದು ನಮ್ಮ ಕಮಲಾಪ್ರಸಾದ ಮುಸಲ್ಮಾನನಾದರೆ, ನಾವು ಅವನ ಬಳಿಗೆ ಹೋಗುವುದನ್ನು ಬಿಟ್ಟೇವೆ? ನಮ್ಮಿಂದ ಸಾಧ್ಯವಿದ್ದಷ್ಟು ಆತನನ್ನು ಸತ್ಪಥಕ್ಕೆ ಕರೆತರಲು ಪ್ರಯತ್ನಪಡಬಾರದೇ?" ಎಂದು ಪ್ರಶ್ನಿಸಿದಳು.

ದೇವಕಿಯ ಈ ವಾದದಿಂದ ಬದರೀಪ್ರಸಾದನು ಸ್ವಲ್ಪ ಮೆತ್ತಗಾದನು.

ಆದರೆ ತನ್ನ ಸಿದ್ಧಾಂತವನ್ನು ಬಿಡಲಾರದವನಾಗಿ– "ನಾನಂತೂ ಅವನ ಬಳಿಗೆ ಹೋಗುವವನಲ್ಲ. ನಿನ್ನ ಅಭಿಪ್ರಾಯದಂತೆ ಅವನು ಹಾದಿಗೆ ಬರುವುದಾದರೆ ಹೋಗಿ ನೋಡು. ನನ್ನನ್ನು ಒತ್ತಾಯಿಸುವುದೇಕೆ?" ಎಂದನು.

ದೇವಕಿ– ಬೇಡ. ಅವನನ್ನೇ ಇಲ್ಲಿಗೆ ಕರೆಸಬಹುದು.

ಬದರೀಪ್ರಸಾದ– ಕರೆಸುವುದಾದರೆ, ಕರೆಸು. ಆದರೆ ಅವನೆದುರು ಕೈಜೋಡಿಸಿ, ಅಡ್ಡಬಿದ್ದು, 'ಪ್ರೇಮಾ ನಿನ್ನನ್ನು ಬಿಟ್ಟಿರಲಾರಳು. ಅವಳಿಗೆ ನೀನೆ ಗತಿ' ಎಂದು ಬಿನ್ನವಿಸುವುದನ್ನು ನಾನು ಮೆಚ್ಚಲಾರೆ. ಅವಳಿಗೆ ಬೇರೆ ಜನರು ವರರಾಗಿ ದೊರೆಯರೆಂದಿಲ್ಲ.

ದೇವಕಿ– ನಿಮ್ಮ ಮನಸ್ಸೊಪ್ಪಿದವರಿಗೆ ಅವಳನ್ನು ಕೊಡುವುದಕ್ಕೆ ಅವಳು ದಿನಕ್ಕೊಬ್ಬನಲ್ಲಿ ಮನಸ್ಸನ್ನಿಡುವವಳಲ್ಲ. ಅವಳ ಸ್ಥಿತಿಯನ್ನು ಸ್ವಲ್ಪ ವಿಚಾರಿಸಿರಿ. ದೇಹದಲ್ಲಿ ಪ್ರಾಣವೇ ಇಲ್ಲದಂತಾಗಿದೆ. ಏಕಾಕಿನಿಯಾಗಿ ಮಂಚದ ಮೇಲೆ ಅಳುತ್ತಾ ಬಿದ್ದಿರುವಳು.

ಬದರೀಪ್ರಸಾದ– ಎಂಟು ಹತ್ತು ದಿನಗಳಲ್ಲಿ ಎಲ್ಲಾ ಸರಿಯಾದೀತು.

ದೇವಕಿ– ಎಂಟು ಹತ್ತು ದಿವಸದಲ್ಲಿ ಕೂಗಿ ಕೂಗಿ ಪ್ರಾಣಬಿಟ್ಟಾಳೆಂದೇ ನನಗನಿಸುತ್ತದೆ.

ಬದರೀಪ್ರಸಾದ– (ಸಿಟ್ಟಿನಿಂದ ಕಿಡಿಕಿಡಿಯಾಗಿ) ಹಾಗೆ ಸತ್ತರೆ ಸಾಯಲಿ. ನಾನೆಂದೂ ಅಮೃತರಾಯನೆದುರು ಹಲ್ಲುಕಿರಿಯಲಾರೆ. ವಿಧವಾವಿವಾಹದಂತಹ ಘೃಣಿತ ವ್ಯವಸಾಯದಲ್ಲಿ ಕೈಹಾಕುವಂಥವನೊಡನೆ ನಾನೆಂದೂ ಸಂಬಂಧವನ್ನು ಬೆಳೆಸಲಾರೆ.

ಬದರೀಪ್ರಸಾದನು ಹೊರಟು ಹೋದನು. ದೇವಕಿಯು ತಳಮಳಗೊಂಡಳು. ಪತಿಯ ಸ್ವಭಾವದ ಸಂಪೂರ್ಣ ಪರಿಚಯ ಅವಳಿಗಿತ್ತು; ಆದರೆ ಅವನು ಇಷ್ಟೂ ವಿಚಾರಶೂನ್ಯನೆಂದು ಅವಳಿಗೆ ತಿಳಿದಿರಲಿಲ್ಲ. ತಿಳಿಯ ಹೇಳಿದರೆ ಅಮೃತರಾಯನು ತನ್ನ ದಾರಿಯನ್ನು ಬಿಟ್ಟಾನೆಂದು ಅವಳಿಗೆ ಧೈರ್ಯವಿತ್ತು. ಆದರೆ ಹೋಗಲು ಉಪಾಯವಿಲ್ಲ.

ಅಷ್ಟರಲ್ಲಿ ಪ್ರೇಮಾ ಉಪ್ಪರಿಗೆಯಿಂದ ಇಳಿದು ಬಂದು ಮಂಚದ ಬಳಿ ನಿಂತಳು. ಕಣ್ಣುಗಳು ಕೆಂಪಾಗಿದ್ದುವು.

"ಅಳಬೇಡ ಮಗೂ. ನಾಳೆ ನಾನು ಅವನನ್ನಿಲ್ಲಿ ಬರಿಸಿ ತಿಳಿಯ ಹೇಳುತ್ತೇನೆ. ಆತ ನನ್ನ ಮಾತನ್ನು ಗಾಳಿಗೆ ಕಟ್ಟಲಾರ" ಎಂದು ಮಗಳಿಗೆ ಸಮಾಧಾನವನ್ನು ಹೇಳಿದಳು ದೇವಕಿ.

ಪ್ರೇಮಾ– "ದಮ್ಮಯ್ಯ, ಬೇಡ; ನಿಮ್ಮ ಕಾಲಿಗೆ ಬೀಳುತ್ತೇನೆ; ಅವನ

ಲ್ಲೇನೂ ಹೇಳಬೇಡಿರಿ. ಅವನು ನಮ್ಮ ಸೋದರಿಯರ ಸಲುವಾಗಿಯೇ ಈ ಪ್ರತಿಜ್ಞೆಯನ್ನು ಮಾಡಿದ್ದಾನೆ. ಇಷ್ಟು ವೀರಶ್ರೀಯನ್ನು ತೋರಿದವರು ನಮ್ಮಲ್ಲಿ ಎಷ್ಟು ಜನರಿದ್ದಾರೆ? ನಾನು ಅವನ ಈ ಶುಭಕಾರ್ಯಕ್ಕೆ ಅಡ್ಡಿಯಾಗಲಾರೆ" ಎಂದಳು ಕಂಬನಿದುಂಬಿ.

ದೇವಕಿ ವಿಸ್ಮಿತಳಾದಳು. ಮಗಳು ಏನು ಹೇಳುವಳೆಂದು ಅವಳಿಗೆ ತಿಳಿಯಲಿಲ್ಲ.

ಪ್ರೇಮಾ ಮತ್ತೆ ಹೇಳಿದಳು – "ಇಂತಹ ಸುಶಿಕ್ಷಿತರು ಈ ಕಾರ್ಯವನ್ನು ಕೈಕೊಳ್ಳದಿದ್ದರೆ, ನಮ್ಮ ನಿರ್ಭಾಗ್ಯ ಸಹೋದರಿಯರನ್ನು ಕಾಪಾಡುವವರಾರು?"

ದೇವಕಿ– ನಿನ್ನವಸ್ಥೆಯೇನಾದೀತು, ಮಗಳೇ?

ಪ್ರೇಮಾ– (ಗಂಭೀರವಾಗಿ) ನನಗೆ ಈ ವಿಷಯದಲ್ಲಿ ಸ್ವಲ್ಪವೂ ದುಃಖವಿಲ್ಲವಮ್ಮ. ನಾನು ಕೂಡ ಈ ಕಾರ್ಯದಲ್ಲಿ ಅವನಿಗೆ ಸಹಾಯಕಳಾಗುವವಳೇ! ನನ್ನ ತಲೆಯ ಮೇಲೆ ನಿಮ್ಮ ಆಶೀರ್ವಾದವಿರುವ ವರೆಗೆ ನನಗೇತರ ಚಿಂತೆ? ನನಗಾಗಿ ನೀವು ಒಂದಿಷ್ಟೂ ಚಿಂತಿಸಬೇಡಿರಿ. ನಾನು ಅವಿವಾಹಿತೆಯಾಗಿಯೇ ಸುಖದಿಂದಿರುವೆನು.

ದೇವಕಿ– (ಅಶ್ರುಪೂರಿತೆಯಾಗಿ) ಇದೇನು ಹೇಳುತ್ತಿರುವೆ ಮಗು? ಮನೆಯಲ್ಲಿ ಊಟಕ್ಕೆ ತತ್ವಾರವಾದವರೂ ತಮ್ಮ ಹೆಣ್ಣುಮಕ್ಕಳನ್ನು ಅವಿವಾಹಿತೆಯರನ್ನಾಗಿ ಇಟ್ಟುಕೊಳ್ಳುವುದಿಲ್ಲ. ಭಿಕ್ಷೆ ಬೇಡಿಯಾದರೂ ಮದುವೆ ಮಾಡದೆ ಉಳಿಯುವುದಿಲ್ಲ. ನಮ್ಮಲ್ಲಂತೂ ಯಾವುದಕ್ಕೂ ಕೊರತೆಯಿಲ್ಲ. ಆದ್ದರಿಂದ ನಿನಗಾಗಿ ಬೇರೆ ವರನನ್ನು ಹುಡುಕುವೆವು.

ಪ್ರೇಮಕುಮಾರಿಯ ಹೃದಯ ಕಂಪಿಸಿತು. ಮೂರು ವರ್ಷಗಳಿಂದ ತನ್ನ ಹೃದಯಮಂದಿರದಲ್ಲಿ ಅಮೃತರಾಯನ ಮೂರ್ತಿಯನ್ನಿರಿಸಿ ಪೂಜಿಸುತ್ತಿದ್ದಳು. ಆ ಮೂರ್ತಿಯನ್ನು ಕಿತ್ತೆಸೆಯುವವರಾರು? ಹೃದಯದಲ್ಲಿ ಆ ಮೂರ್ತಿಯು ಕುಳಿತುಕೊಂಡಿದ್ದಂತೆಯೇ ಅವಳು ಬೇರೆ ಪುರುಷನನ್ನು ಮದುವೆಯಾಗಲು ಶಕ್ಯವಿದೆಯೆ? ಅದು ವಿವಾಹದ ಅಭಿನಯವಾಗಲಿಕ್ಕಿಲ್ಲವೆ? ಅಂತಹ ಜೀವನ ಎಷ್ಟು ಭಯಂಕರ!

ಪ್ರೇಮಾ ನೆಲವನ್ನು ನೋಡುತ್ತಾ – "ಅಮ್ಮಾ, ನನಗಾಗಿ ನೀವು ಯಾವ ಕಷ್ಟವನ್ನು ಹೊಂದುವುದೂ ಬೇಡ. ನಾನು ಬ್ರಹ್ಮಚಾರಿಣಿಯಾಗಿರುವ ನಿಶ್ಚಯವನ್ನು ಕೈಕೊಂಡಿದ್ದೇನೆ" ಎಂದಳು.

* * * * *

ಬಾಬೂ ಬದರೀಪ್ರಸಾದನ ಮಗ ಕಮಲಾಪ್ರಸಾದನು ಬರುವನೆಂಬ ಗುಲ್ಲೆದ್ದಿತು. ಅವನು ಚಲಚ್ಚಿತ್ರದ ಅನನ್ಯಭಕ್ತನಾಗಿದ್ದನು; ನಿತ್ಯ ಹೋಗುತ್ತಿದ್ದನು. ಆಳುಗಳ ಮೇಲೆ ಅವನ ಕಠೋರ ಶಾಸನವಿತ್ತು. ಹಾಗಾಗಿ ಅವನ ಬೂಟಿನ ಚರಮರ ಶಬ್ದವನ್ನು ಕೇಳಿದೊಡನೆಯೇ ಆಳುಗಳು ಭಯಗೊಳ್ಳುತ್ತಿದ್ದರು. ಹೊರಗಿನಿಂದ ಬರುವಾಗ ಯಾರಾದರೊಬ್ಬನ ಮೇಲೆ ಹರಿಹಾಯದೆ ಗೃಹಪ್ರವೇಶ ಮಾಡುತ್ತಿದ್ದಿಲ್ಲ. ಬರಬರುತ್ತಲೆ ಒಬ್ಬನೊಡನೆ– "ಐಸ್ ತಂದಿರುವೆಯಾ?" ಎಂದು ಕೇಳಿದನು.

"ಇಲ್ಲ" ಗಂಟಲೊಳಗಿಂದಲೇ ಆಳಿನ ಉತ್ತರ ಹೊರಟಿತು.

"ಐಸ್ ತಂದಿರುವೆಯಾ? ಗಟ್ಟಿಯಾಗಿ ಹೇಳೊ. ನಾಲಗೆ ಇಳಿದು ಹೋಗಿದೆಯೇ?" ಎಂದು ಯಜಮಾನನ ಗರ್ಜನೆಯಾಯಿತು.

ಈಗ ಆಳಿಗೆ ಮಾತೇ ಹೊರಡಲಿಲ್ಲ. ಕಮಲಾಪ್ರಸಾದನು ಅವನ ಎರಡು ಕಿವಿಗಳನ್ನೂ ಹಿಡಿದು, ಹಿಂದಕ್ಕೂ ಮುಂದಕ್ಕೂ ಅಲುಗಾಡಿಸುತ್ತಾ "ಐಸ್ ತಂದಿರುವೆಯಾ ಇಲ್ಲವೆ?" ಎಂದನು.

ಇನ್ನು ಮಾತಾಡದಿದ್ದರೆ ಕಿವಿಗಳೇ ಕಿತ್ತುಹೋದಾವೆಂಬ ಭಯದಿಂದ ಆಳು "ಇಲ್ಲ" ಎಂದನು.

"ಯಾಕೆ ತರಲಿಲ್ಲ?"

"ಹಣ . . . . ."

"ಮನೆಯಲ್ಲಿ ಕೇಳಿಲ್ಲ ಯಾಕೆ?"

"ಕೇಳಿದೆ, ಆದರೆ ಯಾರೂ ಕಿವಿಗೊಡಲಿಲ್ಲ."

"ಸುಳ್ಳು. ನಾನು ಮನೆಯಲ್ಲಿ ವಿಚಾರಿಸುತ್ತೇನೆ. ಒಂದು ವೇಳೆ ನೀನು ಕೇಳಿದ್ದೇ ಸುಳ್ಳೆಂದಾದರೆ ನಿನ್ನ ಜೀವ ತೆಗೆದೇನು."

ಕಮಲಾಪ್ರಸಾದನು ಕ್ರೋಧದಿಂದ ತಾಯಿಯ ಬಳಿ ಹೋಗಿ "ನಿನ್ನೊಡನೆ ಐಸಿಗೆ ಹಣ ಕೇಳಿದನೆ ಆತ?" ಎಂದು ಕೇಳಿದನು.

"ಕೇಳಿರಬಹುದು, ನೆನಪಿಲ್ಲ. . . ಅಮೃತರಾಯನನ್ನು ನೋಡಿದೆಯಾ?" ಎಂದು ಪ್ರಶ್ನಿಸಿದಳು ದೇವಕಿ.

ಕಮಲಾಪ್ರಸಾದ– ಇಲ್ಲ. ಅವನನ್ನು ಕಂಡದ್ದೇ ಇಲ್ಲ. ಅವನ ಕಡೆಗೇ ಹೊರಟಿದ್ದೆ. ಆದರೆ ಅವನು ಯಾವುದೋ ಸಭೆಗೆ ಹೋಗಿದ್ದನೆಂದು ತಿಳಿದೊಡನೆಯೇ ಸಿನೆಮಕ್ಕೆ ಹೋದೆ. ಅವನಿಗೆ ಸಭೆಗೆ ಹೋಗುವುದೊಂದು ಹುಚ್ಚು. ನನಗದನ್ನು ಕಂಡರಾಗುವುದಿಲ್ಲ. ಭಾಷಣ ಕೇಳದೆ ಮನುಷ್ಯನೇನು ಜೀವಿಸಲಾರನೆ? ಎಲ್ಲಿ ನೋಡಿದರೂ ಉಪನ್ಯಾಸಕರೆ!– ಮಳೆಗಾಲದ

ಕಪ್ಪೆಗಳಂತೆ! – ಟರ್ ಟರ್ ಶಬ್ದದಿಂದ ಕಿವಿ ಬಿಡುವುದಕ್ಕೆ ಸಾಧ್ಯವಿಲ್ಲ. ತಮ್ಮ ಸಮಯವಂತೂ ಹಾಳು. ಬೇರೆಯವರ ಸಮಯವನ್ನೂ ಹಾಳು ಗೆಡಹುತ್ತಾರೆ. ಎಲ್ಲರೂ ಮೂರ್ಖರೇ!

ದೇವಕಿ– ಅಮೃತರಾಯ ವಿಧವೆಯನ್ನೇ ವಿವಾಹವಾಗುವುದೆಂದು ಪ್ರತಿಜ್ಞೆ ಮಾಡಿರುವನಂತೆ!

ಕಮಲಾಪ್ರಸಾದ– (ಗಹಗಹಿಸಿ ನಗುತ್ತಾ) ಇದೇ ಆ ಸಭೆಗಳ ಪ್ರಸಾದ. ಮಹಾಶಯರು ವಿಧವೆಯನ್ನೇ ಮದುವೆಯಾಗುವರೆ? ಯಾರು ಹೋದರೂ ಹೋಗದಿದ್ದರೂ ನನಗೆ ಅವನ ಮದುವೆಗೆ ಅಗತ್ಯ ಹೋಗಬೇಕು. ಹೊಸ ರೀತಿಯ ಮದುವೆಯು ಯಾವ ರೀತಿಯಿಂದಾಗುವುದೋ ನೋಡೋಣ. ಅಲ್ಲಿಯೂ ಸಭೆ ಮಾಡಿಯಾರು. ಇಂಥವರಿಗೆ ಮತ್ತೇನು ಬೇಕು? ಎಲ್ಲರೂ ಮೂರ್ಖರು. ಒಬ್ಬರ ತಲೆಯನ್ನಾದರೂ ಮೆದುಳೆಂಬುದು ಮೂಸಿ ಕೂಡ ನೋಡಿಲ್ಲ.

ದೇವಕಿ– ನೀನೊಮ್ಮೆ ಅವನ ಬಳಿಗೆ ಹೋಗಲಾರೆಯಾ?

ಕಮಲಾಪ್ರಸಾದ– ಈಗ ಚಕ್ರವರ್ತಿಯೇ ಕರೆದರೂ ಹೋಗಲಾರೆ; ಹಾಂ! ಯಾವಾಗಲಾದರೂ ಹೋಗಿ ಯೋಗಕ್ಷೇಮವನ್ನು ವಿಚಾರಿಸಿ ಬಂದೇನು. ಬರೇ ಹುಚ್ಚ; ಒಂದಿಷ್ಟಾದರೂ ಬುದ್ಧಿಯಿರುವುದಾದರೆ ಅವನಲ್ಲೇ ಎಂದು ತಿಳಿದಿದ್ದೆ; ಆದರೆ ಬರೇ ಪೆದ್ದ. ಈಗ ಹೇಳು, ಹೆಚ್ಚು ಕಲಿತರೂ ಪ್ರಯೋಜನವೇನು? ನಾನು ಕಲಿಯದಿದ್ದುದೇ ಈಗ ವಿಹಿತವಾಗಿ ಕಾಣುತ್ತದೆ. ಹೆಚ್ಚು ಕಲಿತರೆ ಬುದ್ಧಿಭ್ರಂಶವಾಗುತ್ತದೆ. ಓದಿ ಕಣ್ಣುಗಳೇ ದುರ್ಬಲವಾಗು ವಾಗ ಬುದ್ಧಿಯು ಉಳಿದೀತೆ? ಅದೆಲ್ಲಾ ಇರಲಿ, ಈಗ ಯಾವ ವಿಧವೆಯೆಂದು ನಿರ್ಧಾರವಾಯಿತು? ಮಿಸರಿಯು ಎಲ್ಲಿರುವಳೀಗ? ನಾಳೆಯೇ ಅವಳಿಗೆ ಸುದ್ದಿ ಕಳುಹಿಸೋಣ. ಯಾರೂ ಹೋಗುವವರಿಲ್ಲವಾದರೆ ನಾನೇ ಹೋಗು ವೆನು. ಏನು ಮಜಾ? ಮಿಸರಿ ಈಗ ಎಲ್ಲಿರಬಹುದು? ಇನ್ನಾಕೆಗೆ ಸೋದರ ಭಾವನ ಸೆರೆಯಲ್ಲಿರಬೇಕೆಂದಿಲ್ಲ.

ಇಷ್ಟರಲ್ಲಿ ಯುವತಿಯೋರ್ವಳು ಬಂದು ಅಂಗಳದಲ್ಲಿ ಕಾಲಿಟ್ಟಳು. ಕಮಲಾ ಪ್ರಸಾದನನ್ನು ಕಾಣುತ್ತಲೇ ಬಾಗಿಲಲ್ಲೇ ಮಾಯವಾದಳು. ದೇವಕಿಯು ಇದನ್ನು ನೋಡಿ ಕಮಲಾ ಪ್ರಸಾದನೊಡನೆ "ನೀನು ಸ್ವಲ್ಪ ಕೋಣೆಯೊಳಗೆ ಹೋಗು. ಪೂರ್ಣಾ ಪಾಗಾರದ ಬಾಗಿಲಲ್ಲೇ ಇರುವಳು" ಎಂದಳು.

ಪೂರ್ಣೆಯನ್ನು ನೋಡುತ್ತಲೇ ಪ್ರೇಮಾ ಓಡಿಬಂದು ಅವಳನ್ನು ತಬ್ಬಿ

ಕೊಂಡಳು. ನೆರೆಯಲ್ಲೇ ಪಂಡಿತ ವಸಂತಕುಮಾರನು ವಾಸಿಸುತ್ತಿದ್ದನು; ಯಾವುದೋ ಆಫೀಸಿನಲ್ಲಿ ಕ್ಲಾರ್ಕನಾತ. ಪೂರ್ಣಾ ಅವನ ಮಡದಿಯಾಗಿದ್ದಳು; ಬಹಳ ಸುಂದರಿ ಮತ್ತು ಸುಶೀಲೆ. ಮನೆಯಲ್ಲಿ ಇಬ್ಬರೇ ಅಲ್ಲದೆ ಮತ್ತಾರೂ ಇರಲಿಲ್ಲ. ಹತ್ತು ಗಂಟೆಗೆ ವಸಂತನು ಆಫೀಸಿಗೆ ಹೋದೊಡನೆಯೇ ಪೂರ್ಣಾ ಇಲ್ಲಿಗೆ ಬಂದು ಪ್ರೇಮ ಕುಮಾರಿಯೊಡನೆ ಸರಸಸಲ್ಲಾಪ ಮಾಡುತ್ತಾ ಸಂಜೆಯ ವರೆಗೆ ಕುಳ್ಳಿರುತ್ತಿದ್ದಳು. ಪ್ರೇಮ ಕುಮಾರಿಗೆ ಪೂರ್ಣಾ ಎಂದರೆ ತುಂಬಾ ಪ್ರೇಮ. ಯಾವಾಗಲಾದರೂ, ಏನಾದರೂ ಕಾರಣದಿಂದ ಪೂರ್ಣಾ ಬಾರದಿದ್ದರೆ ಇವಳೇ ಅವಳ ಮನೆಯ ವರೆಗೆ ಹೋಗುತ್ತಿದ್ದಳು. ಇಂದು ವಸಂತನು ಎಲ್ಲಿಗೋ ಹೋಗಿದ್ದನು. ಪೂರ್ಣಾ ಇಲ್ಲಿಗೆ ಬಂದಳು. ಪ್ರೇಮಾ ಅವಳನ್ನು ಮೇಲಕ್ಕೆ ತನ್ನ ಕೋಣೆಗೆ ಕರೆದು ಕೊಂಡು ಹೋದಳು.

ಪೂರ್ಣಾ– ನಾನು ಬರುವಾಗ ನಿನ್ನಣ್ಣ ಹೊರಗೇ ಇದ್ದ. ನನ್ನನ್ನು ನೋಡಿರಲೂಬಹುದು.

ಪ್ರೇಮಾ– ಅಣ್ಣನಲ್ಲಿ ಬೇರೆಯವರನ್ನು ಹಣಕುವ ಹವ್ಯಾಸವಿಲ್ಲ. ನಿನ್ನ ಪತಿದೇವನು ಎಲ್ಲಿಗೆ ಹೋಗಿರುವನು?

ಪೂರ್ಣಾ– ಇಂದೊಂದು ನಿಮಂತ್ರಣದಿಂದ ಹೋಗಿರುವರು.

ಪ್ರೇಮಾ– ಇಂದೊಂದು ದೊಡ್ಡ ಸಭೆಯಿತ್ತು. ಅದಕ್ಕೆ ಹೋಗಿಲ್ಲವೆ?

ಪೂರ್ಣಾ– ಅವರು ಯಾವ ಸಭೆಗೂ ಹೋಗುವವರಲ್ಲ. "ದೇವರು ಪ್ರತಿಯೊಬ್ಬನಿಗೂ ಜನ್ಮವಿತ್ತಿರುವನು. ಅವನೇ ತನ್ನ ಇಚ್ಛಾನುಸಾರ ಎಲ್ಲಾ ವ್ಯವಸ್ಥೆಯನ್ನು ಮಾಡುವುದಿಲ್ಲವೆ? ಮತ್ತೇಕೆ ನಾವು ಅವನ ಕಾರ್ಯವನ್ನು ಸುಧಾರಿಸುವ ಸಾಹಸ ತೋರಬೇಕು" ಎನ್ನುತ್ತಿರುವರು.

ಪ್ರೇಮಾ– ಇಂದಿನದು ಅಂತಹ ಸಭೆಯಲ್ಲ. ನೀನು ಬರುತ್ತಿದ್ದರೆ ನಾವಿಬ್ಬರೂ ಹೋಗಬಹುದಿತ್ತು. ಸಮಾಜಸುಧಾರಣೆಯು ವಿಷಯವಾಗಿತ್ತು.

ಪೂರ್ಣಾ– ಸ್ತ್ರೀ ಸುಧಾರಣೆಯ ವಿಷಯವಾಗಿರಬಹುದು.

ಪ್ರೇಮಾ– ಅಂದರೆ ಅಬಲೆಯರ ಸುಧಾರಣೆಯ ಅವಶ್ಯಕತೆಯಿಲ್ಲವೆ?

ಪೂರ್ಣಾ– ಅದಕ್ಕಿಂತಲೂ ಮೊದಲು ಪುರುಷರು ಸುಧಾರಿಸಿಕೊಳ್ಳಲಿ. ಪುರುಷರು ಸುಧಾರಿಸಿಕೊಂಡರೆ ಸ್ತ್ರೀಯರು ತಾವಾಗಿಯೇ ಸುಧಾರಿಸಿಕೊಳ್ಳುವರು. ಎಲ್ಲವುಗಳ ಮೂಲವೂ ಗಂಡುಸರನ್ನೇ ಹೊಂದಿಕೊಂಡಿದೆ.

ಪ್ರೇಮಾ– (ನಗುತ್ತಾ) ಸಮಾಜದಲ್ಲಿ ಸ್ತ್ರೀ ಪುರುಷರಿಬ್ಬರ ಸುಧಾರಣೆಯಾಗುವ ವರೆಗೆ ಜೀವನವು ಸುಖರೂಪವಾಗಲಾರದು. ಪೂರ್ಣಾ,

ಪುರುಷರು ವಿದ್ಯಾವಂತರಾದರೆ, ಸ್ತ್ರೀಯರು ತಸ್ನಿಂದ ತಾನೆ ವಿದ್ಯಾವತಿಯ ರಾಗುವರೆಂದು ನಿನ್ನ ಮತವೇನು? ಪುರುಷರು ಹೆಚ್ಚಾಗಿ ಆಡಂಬರ ಹೀನ ಪೋಷಾಕನ್ನು ಧರಿಸುವರು. ನಾವು ಮಾತ್ರ, ಅದೇಕೆ ಜರತಾರಿಯ ಸೀರೆ ಗಳನ್ನೇ ಬಯಸುತ್ತೇವೆ? ಕೆಲವು ಗಂಡುಸರು ಬ್ರಹ್ಮಚಾರಿಗಳಾಗಿರುವರು. ಸ್ತ್ರೀಯರಲ್ಲಿ ಅಂಥವರು ಇರುವರೇ? ನನ್ನ ಅಭಿಪ್ರಾಯದಂತೆ ಬ್ರಹ್ಮಚಾರಿಣಿ ಯಾಗಿರುವ ಸುಖವು ವಿವಾಹವಾದರೆ ದೊರೆಯಲಾರದು.

ಪೂರ್ಣಾ– ಎಂತಹ ಮಾತಿದು? ಅಮೃತರಾಯನು ಈ ಮಾತನ್ನು ಕೇಳಿದರೆ ಏನೆಂದಾನು? ಅಲ್ಲ, ನಾನೇ ಅವನಿಗೆ "ಪ್ರೇಮಾ ನಿನ್ನನ್ನು ವಿವಾಹ ವಾಗುವುದಿಲ್ಲ, ನೀನು ಬೇರೆ ಆಲೋಚನೆ ಮಾಡು" ಎಂದು ಬರೆದುಬಿಡಲೇ?

ಪ್ರೇಮಕುಮಾರಿಯು ಅಮೃತರಾಯನ ಪ್ರತಿಜ್ಞೆಯ ಸುದ್ದಿಯನ್ನು ಹೇಳಲಿಲ್ಲ. ಇದನ್ನು ಹೇಳಿದರೆ ಪೂರ್ಣೆಯ ದೃಷ್ಟಿಯಲ್ಲಿ ಅಮೃತರಾಯನ ವ್ಯಕ್ತಿತ್ವವು ಕೀಳು ತರಗತಿಯದೆಂದಾದೀತು ಎಂಬುದೇ ಇದಕ್ಕೆ ಕಾರಣ.

ಪ್ರೇಮಾ– ಅವರೇ ವಿವಾಹವಾಗುವುದಿಲ್ಲವಂತೆ!

ಪೂರ್ಣಾ– ಹಸಿ ಹಸಿ ಸುಳ್ಳು.

ಪ್ರೇಮಾ– ಅಲ್ಲ ಪೂರ್ಣಾ, ಸುಳ್ಳಲ್ಲ. ಮದುವೆಯಾಗುವ ಮನಸ್ಸೇ ಇಲ್ಲವಂತೆ. ಮೊದಲೇ ಬಹುಶಃ ಇದ್ದಿಲ್ಲ. ಅಕ್ಕನ ಮರಣಾನಂತರ ವಿರಕ್ತ ರಂತಾದರು. ಆದರೆ ತಂದೆಯವರ ಒತ್ತಾಯದಿಂದ ನನ್ನನ್ನೊಮ್ಮೆ ಒಪ್ಪಿದರು. ಈಗೀಗ ಮಾತ್ರ ಮೊದಲಿನ ದಾರಿಯೇ! ಗೃಹಸ್ಥನಲ್ಲದ ಯಾರಾದ ರೊಬ್ಬನು ಸೇವಾಕಾರ್ಯವನ್ನು ಮಾಡಲು ಇಚ್ಛಿಸುವುದಾದರೆ, ಆತನು ಮದುವೆಯ ಸಂಕೋಲೆಯನ್ನು ಕಾಲಿಗೆ ಹಾಕಿಕೊಳ್ಳಬಾರದು. ಇದರಿಂದ ನನಗೇನೂ ದುಃಖವಿಲ್ಲ. ಅವನನ್ನು ನಾನು ಅನುಕರಿಸಬಹುದಲ್ಲ?

ಪೂರ್ಣೆಯ ಮನಸ್ಸಿನಲ್ಲಿ ಆಶ್ಚರ್ಯವು ವೃದ್ಧಿಯಾಗುತ್ತಾ ಬಂತು.

ಪೂರ್ಣಾ– ಇಂದು ನಾಲ್ಕು ಗಂಟೆಯ ವರೆಗೆ ನೀನು ಹೀಗೆನ್ನುತ್ತಿದ್ದಿಲ್ಲ. ಈಗ ಹೀಗೇನು ಬದಲಾಯಿಸಿಬಿಟ್ಟೆ? ಅವನೇ ಯಾರೊಡನಾದರೂ ಹೇಳಿದ್ದ ನೇನು?

ಪ್ರೇಮಾ– ಹೇಳದೆಯೇ ಒಬ್ಬನಿಗೆ ತನ್ನ ವಿಚಾರವನ್ನು ತಿಳಿಸಲು ಸಾಧ್ಯವಾಗುವುದೇ?

ಪೂರ್ಣಾ– ನಾನೊಂದು ಕಾಗದ ಬರೆದು ಅವನಲ್ಲಿ ಕೇಳುತ್ತೇನೆ.

ಪ್ರೇಮಾ– ಬೇಡ ಪೂರ್ಣಾ, ನಿನ್ನ ಕಾಲಿಗೆ ಅಡ್ಡಬೀಳುತ್ತೇನೆ; ಹಾಗೆ ಮಾಡಿಬಿಡಬೇಡ. ಯಾರ ಶುಭಕಾರ್ಯದಲ್ಲೂ ನಾವು ಅಡ್ಡಿಯಾಗ

ಬಾರದು. ನಾವು ಅಂಥವರಿಗೆ ಸಹಾಯಮಾಡಲಾಗದಿದ್ದರೂ, ದಾರಿಯು ಮುಳ್ಳೇಕಾಗಬೇಕು?

ಪೂರ್ಣಾ– ಜೀವಮಾನವಿಡೀ ಅಳುತ್ತಾ ಕುಳಿತಿರುವೆಯಾ?

ಪ್ರೇಮಾ– ತಡೆಯಲಾರದ ದುಃಖವಾಗುವುದಿಲ್ಲ. ಇದರಿಂದಾಗಿ ನನಗೆ ದುಃಖವಾದೀತೆಂದು ಅವರು ತಿಳಿಯುತ್ತಿದ್ದರೆ ಹೀಗೆ ಹೇಳುತ್ತಿದ್ದರೇ? ಹಾಗಾಗಿ ನಾನೇಕೆ ಅವರ ಉತ್ಸಾಹಭಂಗಮಾಡಬೇಕು. ಅವರಿಗೆ ಗಾರ್ಹಸ್ಥ ಜೀವನದಲ್ಲಿ ಸಿಲುಕುವ ಮನಸ್ಸಿಲ್ಲ.

ಪೂರ್ಣಾ– (ಉದಾಸೀನಭಾವದಿಂದ) ನಿನ್ನ ಯೋಚನೆಯೇನೋ ನನಗೆ ಗೊತ್ತಾಗುವುದಿಲ್ಲ. ಆದರೆ ಇದರಿಂದ ದುಃಖವಾಗದೆಂಬುದನ್ನು ನಾನೊಪ್ಪಲಾರೆ.

ಪ್ರೇಮಾ– ಹಾಗಾದರೆ ಅವರಿಗೂ ದುಃಖವಾಗದೆ?

ಪೂರ್ಣಾ– ಪುರುಷರು ಕಠಿನ ಹೃದಯದವರಲ್ಲವೆ?

ಪ್ರೇಮಾ– ನಾನೂ ನನ್ನ ಹೃದಯವನ್ನು ಕಲ್ಲಾಗಿಸಿದರೆ?

ಪೂರ್ಣಾ– ಸರಿ. ನಿನಗಿನ್ನೇನೂ ಹೇಳಲಾರೆ.... ತಾ, ಹಾರ್ಮೋನಿಯಂ. ಒಂದು ಹಾಡು ಹೇಳುವೆನು. ಪ್ರೇಮಾ ಬಾರಿಸುತ್ತಿದ್ದಾಗ, ಪೂರ್ಣಾ ಹಾಡತೊಡಗಿದಳು.

---

೩

ಹೋಳಿಯ ದಿನ ಬಂತು ಪಂಡಿತ ವಸಂತಕುಮಾರನಿಗೆ ಇಂದು ಭಂಗಿ ಸೇದುವ ದಿನವಾಗಿತ್ತು. ತಿಂಗಳ ಹಿಂದೆಯೇ ಭಂಗಿಯನ್ನು ಇಂದಿಗಾಗಿ ತರಿಸಿದ್ದನು. ತನ್ನ ಮಿತ್ರರಿಗೂ ಆಮಂತ್ರಣ ಕೊಟ್ಟಿದ್ದನು. ಬೆಳಗ್ಗೆ ಎದ್ದೊಡನೆಯೇ ಅವನು ಮಾಡಿದ ಮಹತ್ಕಾರ್ಯವೆಂದರೆ ಭಂಗಿ ತೀಡುವುದಾಗಿತ್ತು. ಶಹರಿನ ನಾಲ್ಕಾರು ಹೈದರೂ, ನಿಶ್ಚಿಂತರೂ ಒಟ್ಟುಗೂಡಿದರು. ಕೆಲವರು ಅರೆಯಲೂ ಕೆಲವರು ಪಾನಕ ಮಾಡಲೂ ತೊಡಗಿದರು. ಕೋಲಾಹಲವೇ ಕೋಲಾಹಲ.

ಫಕ್ಕನೆ ಕಮಲಾಪ್ರಸಾದನು ಬಂದನು. ಈ ಸಂದಣಿಯನ್ನು ನೋಡಿ "ನನಗೂ ಇದೆಯೋ?" ಎಂದನು.

ವಸಂತಕುಮಾರನು ಅವನನ್ನು ಸ್ವಾಗತಿಸುತ್ತಾ ಹೇಳಿದನು; "ಅಗತ್ಯ. ತಮಗೆ ಸಿಹಿಯೇ, ಉಪ್ಪಾದುದೇ?"

"ಅರೆ! ಸಿಹಿಯೆದುರಲ್ಲಿ ಉಪ್ಪಾದುದೆ? ಆದರೆ ಕೇಸರಿ ಮತ್ತು ಸರಾಯಿ ಬೇಕೇ ಬೇಕು. ಯಾರನ್ನಾದರೂ ಕಳುಹಿಸಿ ನಮ್ಮಲ್ಲಿಂದ ತರಿಸಬಹುದಲ್ಲ? ಯಾರು ಹೋದರೂ ಪ್ರೇಮಕುಮಾರಿಯೊಡನೆ ಕೇಳಿ ತರಬೇಕು. ಎಲ್ಲಿಯಾದರೂ ನನ್ನ ಪತ್ನಿಯೊಡನೆ ಕೇಳಿದರೆ ಧರ್ಮಕ್ಕೆ ಬೈಗಳು ಸಿಕ್ಕೀತು. ಇಂತಹ ಸಂತೋಷಕೂಟದಲ್ಲಿ ಅವಳ ಅಡ್ಡಿ ಇದ್ದೇ ಇದೆ. ವಸಂತ, ಸ್ತ್ರೀಯರನ್ನು ಸಂತೋಷಗೊಳಿಸುವ ಯಾವುದಾದರೂ ಒಂದು ಉಪಾಯವನ್ನು ತಿಳಿಸು, ನೋಡೋಣ" ಎಂದನು ಕಮಲಾಪ್ರಸಾದ.

ವಸಂತಕುಮಾರನು ಮುಗುಳುನಗುತ್ತಾ "ನನಗೆ ಅಂತಹ ಕಷ್ಟ ಬಂದೇ ಗೊತ್ತಿಲ್ಲವಷ್ಟೆ?" ಎಂದನು.

"ಎಂದರೆ ನೀನೇ ಭಾಗ್ಯವಂತನಪ್ಪ! ಪೂರ್ಣಾ ನಿನ್ನೊಡನೆ ಎಂದೂ ಸಿಟ್ಟಾಗುವುದಿಲ್ಲವೆ?"

"ಎಂದೂ ಇಲ್ಲ."

"ಯಾವ ವಸ್ತುವಿಗಾದರೂ ಹಟಮಾಡುವುದಿಲ್ಲವೆ?"

"ಇಲ್ಲವೇ ಇಲ್ಲ."

"ಹಾಗಾದರೆ ನಿನ್ನಂತಹ ಪುಣ್ಯವಂತ ಬೇರೊಬ್ಬನಿಲ್ಲ. ನಾನೆಲ್ಲಾದರೂ ಮನೆಯಿಂದ ಹೊರಗಾದರೆ ರಂಭಾಟ ಇದ್ದದ್ದೆ. ದಿನಾಲೂ ಸಿನೆಮ ನೋಡುತ್ತೇನೆ; ಅನಂತರ ಅವಳನ್ನು ಹೇಗಾದರೂ ಸಮಾಧಾನಪಡಿಸಬೇಕಾಗುತ್ತದೆ."

"ಸಿನೆಮಕ್ಕೆ ಹೋಗದಿದ್ದರೇನು?"

"ವಾಹ! ನೀನು ಹೇಳುವುದು ಸರಿ. ದೇವರಾಣೆ ಸರಿ. ಅವಳು ನಿಲ್ಲಿಸಿಕೊಂಡ ದಿವಸ ಹೋಗುವುದಿಲ್ಲ. ಅರೆ, ಕೇಸರಿಗೆ ಹೋದವನು ಇನ್ನೂ ಬರಲಿಲ್ಲವೇಕೆ? ಒಂದು ವೇಳೆ . . . . ಪ್ರೇಮಾ ಕೊಡದಂತೆ ಅವಳು ತಡೆದಿರಲಿಕ್ಕೂ ಸಾಕು. ನಾನು ಈಗಲೇ ಹೋಗಿ ಎಲ್ಲವನ್ನೂ ತರುವೆನು. ನಾನು ಬರುವ ವರೆಗೆ ಕಾದಿರಬೇಕು." ಎಂದು ಹೇಳಿ ಕಮಲಾಪ್ರಸಾದನು ಮನೆಗೆ ಹೋದನು. ಯಾವುದೊ ಕೆಲಸಕ್ಕಾಗಿ ವಸಂತನು ಒಳಹೋದನು. ಅವನ ಪತ್ನಿಯು ಎಣ್ಣೆ ತೆಗೆಯುವುದಕ್ಕಾಗಿ ಎಳ್ಳನ್ನು ಅರೆಯುತ್ತಿದ್ದಳು. ವಸಂತನ ವಿವಾಹವಾದ ಮೇಲೆ ಇದು ಎರಡನೆಯ ಹೋಳಿಯಾಗಿತ್ತು. ಆದರೆ ಮೊದಲಿನ ಹೋಳಿಯ ಕಾಲದಲ್ಲಿ ಪಂಡಿತನ ಸಂಪಾದನೆ ಏನೂ ಇಲ್ಲ ವಾದ್ದರಿಂದ ಪೂರ್ಣೆಯನ್ನು ತೃಪ್ತಿಪಡಿಸುವುದಾಗಲಿಲ್ಲ. ಆದರೆ ಈಗ ಅವನ ಸಂಪಾದನೆಯು ಸಾಧಾರಣ ಚೆನ್ನಾಗಿಯೇ ಇತ್ತು. ಪೂರ್ಣೆಯನ್ನು ರಮಿಸು ವುದಕ್ಕಾಗಿ ಹೊಸ ಸೀರೆಯೊಂದನ್ನು ತಂದಿದ್ದನು. ಒಂದೆರಡು ಆಭರಣ ಗಳನ್ನೂ ಮಾಡಿಸಿದ್ದನು. ಆ ಸೀರೆಯನ್ನುಟ್ಟುದರಿಂದ ಇಂದು ತನ್ನ ಪತ್ನಿಯು ಅವನಿಗೆ ಅಪ್ಸರೆಯಂತೆ ಕಂಡಳು. ಅವಳ ಬಳಿ ಸಾರಿ "ಇಂದು ನಿನ್ನನ್ನು ನನ್ನ ಕಣ್ಣುಗಳ ಮೇಲೆ ಕುಳ್ಳಿರಿಸುವನೊ ಎನ್ನಿಸುತ್ತದೆ" ಎಂದು ನುಡಿದನು.

ಅರೆದ ಎಳ್ಳನ್ನು ಒಂದು ತಪಲೆಗೆ ತುಂಬುತ್ತಾ "ನಿಮ್ಮ ಕಣ್ಣೆದುರಲ್ಲೆ ಇರುವೆನಲ್ಲ?" ಎಂದು ಮರುಮಾತುಗೊಟ್ಟಳು ಪೂರ್ಣಾ.

"ಸ್ವಲ್ಪ ಮಿಂದು ಬರುವೆನು. ಕಮಲಾ ಹತ್ತು ಗಂಟೆಯ ಮೊದ ಲಂತೂ ಬರುವಂತಿಲ್ಲ."

"ಮೊದಲು ಇಲ್ಲಿ ಸ್ವಲ್ಪ ಕುಳಿತು, ಇದನ್ನು ಸ್ವಲ್ಪ ತಿಕ್ಕಿಕೊಳ್ಳಿರಿ. ಆ ಮೇಲೆ ಸ್ನಾನ."

"ಊಹೂಂ, ಛೆ. ನಾನು ಎಣ್ಣೆ ತಿಕ್ಕುವುದಿಲ್ಲ. ಮಿಂದು ಬರುತ್ತೇ ನೆಂದರೆ? ನನ್ನ ಪಂಚೆ ಕೊಡೇ."

"ಎಲ, ಹೋಳಿಯ ಎಣ್ಣೆ ತಿಕ್ಕುವುದಿಲ್ಲ? ಹೀಗೆಯೋ ಕ್ರಮ? ಬಂದು ಕುಳಿತುಕೊಳ್ಳಿ, ನೋಡೋಣ."

"ಛೀ, ನನಗೇನೂ ಇಷ್ಟವಿಲ್ಲವೆಂದರೆ?"

ಪೂರ್ಣಾ ಫಕ್ಕನೇ ಅವನ ಕೈಗಳನ್ನು ಹಿಡಿದುಕೊಂಡು ಅರೆದ ಎಳ್ಳನ್ನು ಅವನ ಮೈಗೆ ತಿಕ್ಕುತ್ತಾ ಮಾತಾಡತೊಡಗಿದಳು: "ಸಮಾಧಾನದಿಂದ ಹೇಳಿ ದರೆ ಕೇಳುವುದಿಲ್ಲ. ಈಗ ಏನು ಮಾಡುತ್ತೀರಿ? ನೋಡೋಣ."

"ಆಗಲಿ. ಸ್ವಲ್ಪ ಬೇಗನೇ ಆಗಲಿ. ಬಹಳ ಸೆಕೆಯಾಗುತ್ತದೆ."

"ಇನ್ನು ಸ್ನಾನಕ್ಕೆಂದು ಗಂಗಾನದಿಗೆ ಹೋಗಬೇಡಿ. ಇಲ್ಲೇ ಮೀಯ ಬಹುದು."

"ಅದಲ್ಲ ಪೂರ್ಣಾ. ಇಂದು ಅಲ್ಲಿ ಜನರ ಗುಂಪೇನು ಬಲ್ಲೆಯಾ?"

"ಸರಿ, ಹಾಗಾದರೆ ಬೇಗನೇ ಬನ್ನಿರಿ. ಅಲ್ಲಿ ಅತ್ತಿತ್ತ ಈಜಾಡಬೇಡಿರಿ. ಈಜುವಾಗ ಬಹಳ ದೂರ ಹೋಗುವುದು ನಿಮಗೊಂದು ಅಭ್ಯಾಸ."

ಪಂಡಿತನು ಎಳ್ಳು ಹಚ್ಚಿಕೊಂಡು ಮೀಯಹೊರಟನು. ಸ್ನಾನಘಟ್ಟ ದಿಂದ ದೂರವಾಗಿ ಸ್ನಾನಮಾಡುವುದೇ ಅವನ ಕ್ರಮ. ಒಳ್ಳೆಯ ಈಜು ಗಾರ. ಆದರೆ ಇಂದು ಈಜುವುದಿಲ್ಲವೆಂದು ಮಾತು ಕೊಟ್ಟು ಬಂದಿದ್ದ. ಆದರೆ ಹವೆಯು ಈಜುವ ಆಸೆಯನ್ನೇ ಹುಟ್ಟಿಸುತ್ತಿತ್ತು. ಕೂಡಲೇ ನೀರಿಗೆ ಹಾರಿ ಕಲ್ಲೋಲವಾಗಿಸಿದನು. ಅಷ್ಟರಲ್ಲಿ ಅವನಿಗೆ ಮಧ್ಯಪ್ರವಾಹದಲ್ಲಿ ಒಂದು ಕೆಂಪಗಿನ ವಸ್ತುವು ಕಂಡಿತು. ಸರಿಯಾಗಿ ನೋಡಿದಾಗ ಅದು ಕಮಲವೆಂದು ತಿಳಿಯಿತು. ಸೂರ್ಯಕಿರಣಗಳಿಂದ ಮತ್ತಷ್ಟು ಶೋಭಾಯ ಮಾನವಾದ ಕಮಲವು ವಸಂತಕುಮಾರನ ಮನಸ್ಸನ್ನಪಹರಿಸಿತು. ಅದನ್ನು ಪಡೆದರೆ ತನ್ನ ಪತ್ನಿಯನ್ನು ಸಂತೋಷಗೊಳಿಸಬಹುದೆಂದಾಲೋಚಿಸಿದನು. ಆಕೆಗಾಗಬಹುದಾದ ಆನಂದದ ಮಿತಿಯನ್ನು ಊಹಿಸುತ್ತಾ ಪಂಡಿತನ ಹೃದಯವು ನರ್ತಿಸತೊಡಗಿತು. ಬಲಶಾಲಿಯಾದವನಿಗೆ ಪ್ರವಾಹಮಧ್ಯಕ್ಕೆ ಈಜುವುದು ಕಷ್ಟದ ಕೆಲಸವಲ್ಲ. ತಾನು ಪುಷ್ಪವನ್ನು ತಂದೇನೆಂಬ ದೃಢ ವಿಶ್ವಾಸ ಆತನಲ್ಲಿತ್ತು. ತಾನು ಮುಂಬರಿದಂತೆ ಪುಷ್ಪವೂ ಪ್ರವಾಹದಲ್ಲಿ ಮುಂದೆ ಹೋದೀತೆಂದು ಅವನೆಣಿಸಲೇ ಇಲ್ಲ. ಅದರ ಕಡೆಗೆ ಮುಂದು ವರಿದನು. ಒಂದು ಹದಿನೈದು ನಿಮಿಷಗಳಲ್ಲಿ ಹೊಳೆಯ ಸೆಳೆತಕ್ಕೆ ಸೇರಿದನು.

ಅಲ್ಲಿ ಹೋಗಿ ನೋಡುವಾಗ ಅಷ್ಟೇ ದೂರ ಮುಂದಕ್ಕಿದೆ, ಪುಷ್ಪ! ಈಗ ಸ್ವಲ್ಪ ದಣಿದಂತೆ ತೋರಿತು. ಆದರೆ ದಣಿವಾರಿಸಲಿಕ್ಕೆ ಅಲ್ಲೇನೂ ಆಸ್ಪದವಿಲ್ಲ; ಮುಂದುವರಿಯುತ್ತಲೇ ಹೋದ. ಒಮ್ಮೆ ಕೈಗಳ ಬಲದಿಂದ, ಇನ್ನೊಮ್ಮೆ ಕಾಲುಗಳ ಶಕ್ತಿಯಿಂದ ಹೂವನ್ನು ತಲಪಿದ. ಆದರೇನು? ಸರ್ವಾಂಗವೂ ಶಿಥಿಲವಾಗಿತ್ತು. ಪುಷ್ಪವನ್ನು ಹಿಡಿಯಲು ಕೈನೀಡಿದರೆ ಕೈ ಮುಂದುವರಿಯದಾಯಿತು. ಕಡೆಗೆ ಹಲ್ಲುಗಳಿಂದ ಕಚ್ಚಿ ಹಿಡಿದುಕೊಂಡು ಹಿಂತಿರುಗಿದ. ದಂಡೆಯ ಕಡೆ ನೋಡುವಾಗ ಅದು ಒಂದು ಯೋಜನ ದೂರದಲ್ಲಿದೆಯೆಂದು ತೋರಿತು. ಶರೀರವು ಶಕ್ತಿಗುಂದಿತ್ತು; ಪ್ರವಾಹವೂ

ಪ್ರತಿಕೂಲವಾಗಿತ್ತು. ಅವನ ಶಕ್ತಿಯು ಮಣ್ಣುಪಾಲಾಯಿತು. ಹತ್ತಿರದಲ್ಲಿ ದೋಣಿಯೊಂದೂ ಇಲ್ಲ. ಅಲ್ಲಿಂದ ಕೂಗಿದರೆ ದಂಡೆಗೆ ಕೇಳುವ ಸಂಭವವೂ ಇಲ್ಲ. ಅಲ್ಲೇ ತನ್ನ ಸಮಾಧಿಯೆಂದು ಗ್ರಹಿಸಿದ. ಕ್ಷಣದಲ್ಲಿ ಪತ್ನಿಯು ನೆನಪಾಯಿತು. ಹಾಯ್! ಅವಳು ದಾರಿ ನೋಡುತ್ತಿರಬಹುದು. ತಾನು ಜೀವನಲೀಲೆಯನ್ನು ಮುಗಿಸಿದುದು ಅವಳಿಗೇನು ಗೊತ್ತು? ವಸಂತಕುಮಾರನು ತನ್ನ ಸರ್ವ ಶಕ್ತಿಯನ್ನೂ ಉಪಯೋಗಿಸಿ ನೋಡಿದನು. ಆದರೆ ಅಂಗಗಳು ಚಲಿಸದಾದುವು. ಕಣ್ಣುಗಳಲ್ಲಿ ನೀರೊಸರಿತು. ದಡದಲ್ಲಿದ್ದವರು ಇವನು ಮುಳುಗುವುದನ್ನು ಕಂಡರು. ನಾಲ್ಕಾರು ಮಂದಿ ನೀರಿಗೆ ಹಾರಿದರು. ಆದರೆ ಒಂದೇ ಕ್ಷಣದಲ್ಲಿ ವಸಂತಕುಮಾರನು ತೆರೆಗಳಿಂದಾವೃತನಾದನು. ಆ ಬದುಕು ಅಂತ್ಯಗೊಂಡರೂ, ಆತನ ಅತೃಪ್ತಲಾಲಸೆಯು ತನ್ನ ರಕ್ತರಂಜಿತ ಕಾಂತಿಯನ್ನು ಬೀರುವುದೋ ಎಂಬಂತೆ ಕಮಲಕುಸುಮವು ನೀರಿನಲ್ಲಿ ತೇಲುತ್ತಿತ್ತು.

---

೪

ಲಾಲಾ ಬದರೀಪ್ರಸಾದನ ಸೌಜನ್ಯ ಪ್ರಸಿದ್ಧವಾಗಿತ್ತು. ಅವನನ್ನು ಠಕ್ಕಿಸಿ ಒಂದು ಕಾಸನ್ನೂ ಹೊರಡಿಸುವಂತಿಲ್ಲ. ಆದರೆ ಧರ್ಮ-ಕಾರ್ಯದಲ್ಲಿ ಬಹು ಉದಾರಿಯಾಗಿದ್ದನು. ಸ್ವಾರ್ಥಿಗಳಿಂದ ಮಾರುದೂರವಿದ್ದರೂ ದೀನರಿಗೆ ಸಹಾಯ ಮಾಡುತ್ತಿದ್ದನು. ಪೂರ್ಣಾ ನೆರೆಕರೆಯವಳು, ಮಾತ್ರವಲ್ಲ ಸ್ವಜಾತಿಯವಳು. ಆದುದರಿಂದ ಅವಳನ್ನು ಮಗಳಂತೆ ಕಾಣುತ್ತಿದ್ದನು. ಅವಳಿಗೆ ಸಹಾಯವನ್ನು ಯಾಕೆ ಮಾಡದಿದ್ದಾನು? ಪೂರ್ಣೆಯ ಹಕ್ಕಿನದಾಗಿ ಅವಳಲ್ಲಿದ್ದುದು ಬಹು ಸ್ವಲ್ಪ ಬೆಲೆಯ ಆಭರಣಗಳು ಕೆಲವು ಮಾತ್ರ. ಷೋಡಶಿಯ ದಿನ ಅವಳು ಅವುಗಳನ್ನು ಪ್ರಸಾದನ ಮುಂದಿಟ್ಟು ಕಣ್ಣೀರು ಸುರಿಸುತ್ತಾ "ಇವುಗಳಿಂದ ನನಗಿನ್ನೇನಾಗಬೇಕು?" ಎಂದಳು.

ಬದರೀಪ್ರಸಾದನು ಕೋಮಲ ಕರುಣಸ್ವರದಿಂದ "ಇವುಗಳು ನನಗೇಕೆ ಮಗು? ನನ್ನ ಧರ್ಮ ಅಥವಾ ಪುಣ್ಯವೆಂದು ನಾನೀ ಕೆಲಸ ಮಾಡುತ್ತಿರುವುದೆಂದು ತಿಳಿಯಬೇಡ. ಅದು ನನ್ನ ಕರ್ತವ್ಯ. ಇವುಗಳನ್ನು ನಿನ್ನಲ್ಲೇ ಇಟ್ಟುಕೊಂಡಿರು. ಯಾವ ಕಾಲದಲ್ಲಿ ಅವಶ್ಯವಿದೆಯೆಂದು ಯಾರಿಗೆ

ಗೊತ್ತು? ನನ್ನ ಜೀವವಿರುವ ವರೆಗೆ ನಿನ್ನನ್ನು ಪುತ್ರಿಯೆಂದು ತಿಳಿಯುತ್ತೇನೆ. ನಿನಗಾವ ಕಷ್ಟವೂ ಬರಲಾರದು" ಎಂದನು.

ಷೋಡಶಿಯು ಕಳೆಯಿತು. ಅನೇಕ ಬ್ರಾಹ್ಮಣರು ಭೋಜನ ಮಾಡಿದರು. ದಾನ ದಕ್ಷಿಣೆಯಲ್ಲಿ ಏನೂ ಕಡಿಮೆಯಿದ್ದಿಲ್ಲ.

ರಾತ್ರಿಯ ಹನ್ನೆರಡು ಬಡಿಯಿತು. ಬ್ರಾಹ್ಮಣರ ಊಟ ಮಾಡಿಸಿ ಪ್ರಸಾದನು ತನ್ನ ಮನೆಗೆ ಹಿಂತಿರುಗಿದನು. ಪ್ರೇಮಕುಮಾರಿಯು ತನ್ನ ಕೋಣೆಯ ಬಾಗಿಲಲ್ಲಿ ನಿಂತಿದ್ದಳು. ಆಕೆಯನ್ನು ಕಂಡು "ಏಕೆ ನಿಂತಿರುವೆ ಪ್ರೇಮಾ? ರಾತ್ರಿಯಾಗಿಲ್ಲವೇ? ನಿದ್ರಿಸು" ಎಂದನು ಬದರೀಪ್ರಸಾದ.

"ನಿಮ್ಮ ಊಟವಾಗಬೇಡವೆ?" ಎಂದು ಕೇಳಿದಳು ಪ್ರೇಮಾ.

"ಇಷ್ಟು ರಾತ್ರಿಯಾಗಿ ಇನ್ನೆಂತಹ ಊಟ? ಬಹಳ ಆಯಾಸವಿದೆ. ನಿದ್ರೆ ಮಾಡುವುದೇ ಮುಖ್ಯ" ಎಂದು ಹೇಳಿ ಮಂಚದ ಮೇಲೆ ಕುಳಿತುಕೊಂಡು ಮಾತಾಡಲಾರಂಭಿಸಿದ. "ಪ್ರೇಮಾ, ಪೂರ್ಣೆಯ ತಾಯಿಮನೆಯಲ್ಲಿ ಯಾರೂ ಇಲ್ಲವೆ? ಅವಳಿಗೆ ದುಃಖವಾಗಬಹುದೆಂದು ನಾನು ಕೇಳಿಲ್ಲ."

"ಯಾರಿದ್ದಾರೆ? ತಂದೆ ತಾಯಿಗಳು ಮೊದಲೇ ಪರಲೋಕಕ್ಕೆ ತೆರಳಿದ್ದಾರೆ. ಅವಳ ಮದುವೆ ಮಾಡಿದ್ದೇ ಮಾವ. ವಿವಾಹವಾದ ಮೇಲೆ ಅವನು ಒಮ್ಮೆಯಾದರೂ ಇಲ್ಲಿಗೆ ಬಂದುದಂತೂ ಇರಲಿ; ಇಣಿಕಿ ಕೂಡ ನೋಡಿಲ್ಲ" ಎಂದು ಉತ್ತರಿಸಿದಳು ಪ್ರೇಮಾ.

ಬದರೀಪ್ರಸಾದನು ಹಾಸಿಗೆಯ ಹಚ್ಚಡವನ್ನು ಸರಿಮಾಡುತ್ತಾ ಹೇಳಿದನು. "ಒಬ್ಬಳೇ ಅವಳು ಹೇಗೆ ಇದ್ದಾಳು? . . . . ಅವಳನ್ನು ನಮ್ಮಲ್ಲೇ ಇಟ್ಟುಕೊಂಡರೆ ಏನು ಎಂದೇ ನನ್ನ ಯೋಚನೆ."

"ಬಹಳ ಒಳ್ಳೇದು. ಆದರೆ ಅಮ್ಮ ಏನನ್ನುವಳು?"

"ಹೇಳುವುದೇನು ಒಪ್ಪಿಯಾಳು. ಆದರೆ ಪೂರ್ಣಾ ಒಪ್ಪಿಯಾಳೇ?"

"ಒಪ್ಪದೇನು? ನಾನೇ ಕೇಳುವೆನು."

"ಒಪ್ಪಿದರೆ ಸರಿ. ಇಲ್ಲವಾದರೆ ಅವಳ ಮನೆಯಲ್ಲೇ ಇರಲಿ. ಅವಳ ವೆಚ್ಚ ಇಪ್ಪತ್ತು ರೂಪಾಯಿಗಳಲ್ಲಿ ನಡೆಯದೇ?"

"ಯಥೇಷ್ಟವಾಗಿ! ಅವಳ ಪತಿಯ ಉತ್ಪತ್ತಿ ಐವತ್ತೇ!"

"ನನಗೆ ಇಪ್ಪತ್ತಾದರೂ ಐವತ್ತಾದರೂ ಒಂದೇ. ನಾನು ಬದುಕಿರುವ ತನಕ ಏನೂ ಚಿಂತಿಸಬೇಕಾದ್ದಿಲ್ಲ. ಒಂದು ವೇಳೆ ನನ್ನ ಕಾಲವಾದರೆ ಕಮಲಾನು ಒಂದು ಪೈಯನ್ನೂ ಬಿಚ್ಚಲಾರ. ಆದಕ್ಕಾಗಿ ಏನಾದರೂ ಸ್ಥಾಯೀಕಾರ್ಯವನ್ನು ಮಾಡಬೇಕೆಂದಿದೆ. ನಾಳೆಯೇ ಅವಳ ಹೆಸರಿನಲ್ಲಿ

ಕೆಲವು ಸಾವಿರ ರೂಪಾಯಿಗಳನ್ನು ಬೇಂಕಿನಲ್ಲಿರಿಸುವೆನು. ಬಡ್ಡಿಯಲ್ಲಿ ಅವಳ ಜೀವನನಿರ್ವಾಹವಾಗಬಹುದು. ಮೂಲದಿಂದ ಏನೂ ತೆಗೆಯಕೂಡದೆಂದು ಶರ್ತ ಕೂಡ ಬರೆಯುವೆನು."

ಅಷ್ಟರಲ್ಲಿ ಕಮಲಾಪ್ರಸಾದನು ಕಣ್ಣು ತಿಕ್ಕುತ್ತಾ ಬಂದು "ಇನ್ನೂ ನೀವು ನಿದ್ರಿಸಿಲ್ಲವೇ? ಸೆಕೆಯಾಗುವುದಾದರೆ ಬೀಸಣಿಗೆ ತಂದಿರಿಸಲೇ? ರಾತ್ರಿ ಬಹಳವಾಯಿತಲ್ಲ?" ಎಂದು ತಂದೆಯನ್ನು ಕೇಳಿದನು.

ಬದರೀಪ್ರಸಾದನು "ಸೆಕೆಯಿಲ್ಲ. ಇವಳೊಡನೆ ಮಾತಾಡುತ್ತಿದ್ದೇನೆ. ನಿನ್ನಲ್ಲೂ ಸಲಹೆ ಕೇಳುವ ಅಗತ್ಯವಿದೆ. ನೀನೇ ಬಂದೆ. ಪೂರ್ಣಾ ನಮ್ಮೊಡನೆಯೇ ಬಂದು ಇದ್ದರೇನೆಂದು ಆಲೋಚಿಸುತ್ತಿದ್ದೆವು" ಎಂದು ಮಗನ ಅಭಿಪ್ರಾಯವನ್ನು ತಿಳಿಯುವ ಸಲುವಾಗಿ ಕೇಳಿದನು.

ಕಮಲಾನು ಕಣ್ಣರಳಿಸುತ್ತಾ ಹೇಳಿದನು; "ತಾಯಿ ಒಪ್ಪಳು."

"ತಾಯಿಯ ಸುದ್ದಿ ಬಿಡು. ನಿನ್ನ ಅಭಿಪ್ರಾಯವೇನು?"

ಕಮಲಾಪ್ರಸಾದನು ದೃಢತೆಯಿಂದ ಹೇಳಿದನು; "ಇದಕ್ಕೆ ನಾನು ಸಲಹೆ ಕೊಡಲಾರೆ. ಪ್ರಪಂಚದಲ್ಲಿ ಅನೇಕ ರೀತಿಯವರಿದ್ದಾರೆ. ಅವರೇನು ಹೇಳಿಯಾರು? ತಾವೇ ಬಹು ದೂರ ಯೋಚಿಸಿ."

"ಅವಳ ಪೋಷಣೆಗೆ ಏನಾದರೂ ಮಾಡಬೇಕಲ್ಲ?"

"ನಾವೇನು ಮಾಡಬಹುದು?"

"ಮತ್ತಾರು ಮಾಡುವವರು?"

"ಈ ನಗರದಲ್ಲಿ ನಾವು ಮಾತ್ರ ಇರುವುದಲ್ಲ. ಬೇರೆ ಧನಿಕರೂ ಇದ್ದಾರೆ. ನಮ್ಮ ಯಥಾನುಶಕ್ತಿ ಸಹಾಯ ಕೊಟ್ಟರೆ ಆಯಿತು."

"ಹಾಗಾದರೆ ವಂತಿಗೆಯೆತ್ತಿದರೇನು? ಒಳ್ಳೇದು ತಿರುಗಾಡಿ ವಂತಿಗೆ ಕೂಡಿಸು." ಎಂದನು ಬದರೀಪ್ರಸಾದ.

"ನಾನೇಕೆ ಕೂಡಿಸಬೇಕು?"

"ಮತ್ತಾರು? . . . . ."

ಕಮಲಾಪ್ರಸಾದನಿಗೆ ಒಮ್ಮೆಯೇ ಉತ್ತರಕೊಡಲಾಗಲಿಲ್ಲ. ಸ್ವಲ್ಪ ತಡೆದು ಹೇಳಿದನು "ತಮ್ಮ ನಿಶ್ಚಯವಾದರೂ ಏನು?"

"ನಾನೇನು ನಿರ್ಧರಿಸಲಿ? ನನ್ನ ನಿರ್ಧಾರಕ್ಕೆ ಬೆಲೆಯೆಷ್ಟು? ನೀನು ಮಾಡಿದ್ದೇ ನಿಶ್ಚಯ. ನನ್ನದೇನು ನಿಜ. ಇಂದು ನಾನೇನಾದರೂ ಮಾಡಿ, ನಾಳೆ ನನ್ನ ಕಣ್ಣು ಮುಚ್ಚಿದರೆ, ನೀನು ಮತ್ತೇನಾದರೂ ಅದನ್ನು ಬದಲಿಸಿದರೆ, ಅದು ವ್ಯರ್ಥ ಮತ್ತು ನನಗೊಂದು ಅಪಕೀರ್ತಿ."

ಕಮಲಾಪ್ರಸಾದನು ದುಃಖಿತನಾದನು. "ನೀವು ನನ್ನನ್ನಷ್ಟು ನೀಚ ನೆಂದು ತಿಳಿಯುವಿರೆಂದು ನಾನೆಣಿಸಿದ್ದಿಲ್ಲ."

ಬದರೀಪ್ರಸಾದನು ಪುತ್ರನನ್ನು ಪ್ರೀತಿಸುತ್ತಿದ್ದನು. ತನ್ನ ಮಾತಿನಿಂದ ಅವನಿಗೆ ನೋವಾಯಿತೆಂದು ತಿಳಿದು ಮಾತಿನ ತುದಿಯನ್ನು ತಿರುಗಿಸಿದನು. "ನಿನ್ನನ್ನು ಕೀಳಾಗಿ ತಿಳಿಯುವುದಿಲ್ಲ. ಇಂದು ನಾವು ಮಾಡಿದ ಕಾರ್ಯವು ನಾಳೆಗೆ ಬದಲಾಗುವ ಸಂಭವವಿರಬಹುದು."

ಕಮಲಾನು "ಇಂದು ತಾವೇನು ಮಾಡುವಿರೊ ಅದರಿಂದ ಈ ಕಮಲಾ ಪ್ರಸಾದನಿಗೇನೂ ಕಷ್ಟವಾಗಲಾರದು. ತಾವು ಈ ಗೃಹಸ್ವಾಮಿ. ತಾವೇ ಈ ಸಂಪತ್ತನ್ನು ಗಳಿಸಿದವರು. ತಮಗೇ ಇದರ ಸಂಪೂರ್ಣ ಅಧಿಕಾರ. ತಮ್ಮ ನಿಶ್ಚಯದ ಮೊದಲು ನನಗೇನಾದರೂ ಹೇಳುವುದಿದ್ದರೆ ಹೇಳಬಹುದು. ತಮ್ಮ ನಿಶ್ಚಯದ ವಿರುದ್ಧವಾಗಿ ನಾನು ಒಂದು ತುಟಿ ಎರಡು ಮಾಡಲಾರೆ" ಎಂದನು.

"ಹಾಗಾದರೆ ನಾಳೆ ಅವಳ ಹೆಸರಲ್ಲಿ ನಾಲ್ಕು ಸಾವಿರ ರೂಪಾಯಿ ಬೇಂಕಿನಲ್ಲಿಡಬೇಕು. ಮೂಲದಿಂದ ಏನೂ ತೆಗೆಯಕೂಡದೆಂಬ ಶರ್ತ ಕೂಡ ಬರೆಸಿಬಿಡು. ಅವಳ ಅನಂತರ ಮೂಲವು ನಮ್ಮದಾಗುವುದು."

"ಚೆನ್ನಾಗಿ ಯೋಚಿಸಿದಿರಾ?"

"ಹೌದು, ಚೆನ್ನಾಗಿ ಯೋಚಿಸಿದ್ದೇನೆ. ಅವಳು ಮಾತ್ರ ಇದನ್ನಂಗೀ ಕರಿಸಿಯಾಳೋ ಎಂಬುದು ಮುಂದೆ ತಿಳಿಯಬೇಕಷ್ಟೆ."

"ಅದರಲ್ಲೂ ಸಂಶಯವೇ?"

ಬದರೀಪ್ರಸಾದನು ತಿರಸ್ಕಾರಭಾವದಿಂದ "ಎಲ್ಲರೂ ಸ್ವಾರ್ಥಿಗಳೆಂದೇ ತಿಳಿದಿರುವೆಯಾ? ಕೆಲವರು ಎಂತಹ ಕೀಳುಸ್ಥಿತಿಯಲ್ಲಿದ್ದರೂ ಬೇರೆಯವರ ಸಹಾಯವನ್ನು ನಿರಾಕರಿಸುವರು. ನನಗವಳಲ್ಲಿ ಸಂದೇಹ ಮಾತ್ರವಲ್ಲ; ಅವಳು ಇದಕ್ಕೊಪ್ಪಲಾರಳೆಂಬ ವಿಶ್ವಾಸವಿದೆ. ಒಂದು ವೇಳೆ ಸಂಬಳಕ್ಕೆ ಎಲ್ಲಿಯಾದರೂ ನಿಂತಾಳು, ಇತರರ ಸಹಾಯವನ್ನು ಖಂಡಿತ ಆಶಿಸಲಾರಳು" ಎಂದನು.

ಪ್ರೇಮಾ– ಒಂದು ವೇಳೆ ಒಪ್ಪಿದರೂ ಬಹಳ ಕಷ್ಟದಿಂದ.

ಬದರೀಪ್ರಸಾದ– ನೀನೀ ವಿಷಯ ಅವಳಲ್ಲಿ ನಾಳೆಯೇ ಪ್ರಸ್ತಾಪಿಸು.

ಪ್ರೇಮಾ– ಇದು ನನ್ನಿಂದ ಆಗುವ ಕೆಲಸವಲ್ಲವಪ್ಪಾ. ನಾನೂ ಅವಳೂ ಈ ವರೆಗೆ ಸೋದರಿಯರಂತಿದ್ದವರು. ಈಗ ಈ ರೀತಿ ಮಾತಾಡು ವುದು ಸಾಧ್ಯವೇ? ಮಾತೆತ್ತಿದೊಡನೆಯೇ ನನಗೆ ಅಳು ಬಂದೀತು.

ಬದರೀಪ್ರಸಾದ– ನಾನೇ ಎಲ್ಲವನ್ನೂ ಸರಿಪಡಿಸುವೆನು. ನಿನ್ನ ತಾಯಿಯೊಡನೆ ಮಾತಾಡುವ ವರೆಗೆ ಏನು ಮಾಡಿದರೂ ಪ್ರಯೋಜನವಿಲ್ಲ. ಆದರೆ ಅವಳಿಂದ ಅಡ್ಡಿಯೇನೂ ಬರಲಾರದು.

ಕಮಲಾಪ್ರಸಾದನು ಗೃಹಕೃತ್ಯದಲ್ಲಿ ತಾನೇ ಅದ್ವಿತೀಯನೆಂದು ತಿಳಿದಿದ್ದನು. ಅವನು ದಿನಾಲೂ ಸಿನೆಮ ನೋಡುತ್ತಿದ್ದರೂ ತನ್ನ ಜೇಬಿನಿಂದ ಒಂದು ಪೈ ಸಹ ಖರ್ಚುಮಾಡುತ್ತಿದ್ದಿಲ್ಲ. ಇದೇ ರೀತಿ ಗೃಹಕೃತ್ಯವೂ ಆಗಿತ್ತು. ಈತನ ಈ ಮನೋವೃತ್ತಿಯು ಬದರೀಪ್ರಸಾದನಿಗೆ ಸರಿಬೀಳುತ್ತಿದ್ದಿಲ್ಲ. ಕಮಲಾನ ಅಭಿಪ್ರಾಯದಂತೆ ತನ್ನ ತಂದೆಯು ಈ ವೃದ್ಧಾಪ್ಯದಲ್ಲಿ ಇನ್ನು ಯಾವ ಕಾರ್ಯಮಾಡುವುದೂ ಸರಿಯಲ್ಲ. ಆದರೆ ಈ ಕಾರ್ಯ ತದ್ವಿರುದ್ಧವಿದೆಯೆಂದು ತಿಳಿದು ಒಂದು ಕೂಟನೀತಿಯನ್ನಾಲೋಚಿಸಿದನು. ಪ್ರಾತಃಕಾಲ ಪೂರ್ಣೆಯ ಮನೆಗೆ ಹೋದನು. ಪೂರ್ಣೆಯು ಮೊದಲು ಇವನೆದುರಲ್ಲಿ ಘೋಷೆಯನ್ನು ಹಾಕುತ್ತಿದ್ದಳು. ಆದರೆ ಇನ್ನು ಘೋಷೆಯಲ್ಲಿದ್ದರೆ ಸಾಗುವುದೇ? ಜಗಲಿಯಲ್ಲಿ ಚಾಪೆ ಹಾಸಿದಳು. ಅವನೆದುರಲ್ಲಿ ಅವಳೂ ನಿಂತಳು. ಪೂರ್ಣೆಯ ಹಣೆ ಮುಸುಕಿನಿಂದ ಮುಚ್ಚಿದ್ದರೂ ಸಜಲ ನೇತ್ರಗಳೆರಡು ಕೃತಜ್ಞತೆಯಿಂದ ತುಂಬಿ, ನೆಲವನ್ನು ನೋಡುತ್ತಿದ್ದುವು. ಕಮಲಾಪ್ರಸಾದನು ಇವಳನ್ನು ಹೇಗಾದರೂ ಅವಳ ತಾಯಿಮನೆಗೆ ಕಳುಹುವಂತೆ ಬಂದಿದ್ದರೂ, ಇಲ್ಲಿ ಅವನ ಮನಸ್ಸು ತಿರುಗಿತು. ತಾಯಿಮನೆಗೆ ಹೋದರೆ ಅವಳ ಅವಸ್ಥೆಯೇನಾಗಬಹುದೆಂದು ಕೂಡ ಅವನು ಆ ವರೆಗೆ ಯೋಚಿಸಿರಲಿಲ್ಲ. ಅದರ ಅವಶ್ಯವೂ ಕಂಡಿರಲಿಲ್ಲ. ತನ್ನ ಹಣ ಮಾತ್ರ ಉಳಿದರೆ ಸರಿಯೆಂದು ಏನೇನೋ ಹಂಚಿಕೆಗಳನ್ನು ನೆನೆಯುತ್ತಿದ್ದನು. ಆದರೆ ಈ ವಿಧವೆಯ ಸರಳ, ನಿಷ್ಕಲಂಕ, ದೀನಮೂರ್ತಿಯನ್ನು ಕಂಡು, ತನ್ನ ಆಲೋಚನೆಗೆ ತಾನೇ ನಾಚಿದನು. ಇಂತಹ ಕೋಮಲ ಪುಷ್ಪವನ್ನು ಹರಿದು ಒಲೆಗೆಸೆಯುವ ಹೃದಯಹೀನ ಮನುಷ್ಯನಾರದು? ಜೀವನದಲ್ಲಿ ಮೊದಲ ಬಾರಿ ಅವನನ್ನು ಸೌಂದರ್ಯವು ಸೋಲಿಸಿತು. ಕತ್ತಲೆಯ ಮನೆಯಲ್ಲಿ ದೀಪವುರಿಯಿತು.

"ನೀನಿಲ್ಲಿ ಒಬ್ಬಳೇ ಇರುವುದು ಕಷ್ಟ. ಅಲ್ಲಿ – ನಮ್ಮಲ್ಲಿ ಪ್ರೇಮಾ ಇರುವಳು. ನೀನು ಅಲ್ಲಿಯೇ ವಾಸಿಸಿದರೆ ತೊಂದರೆಯೇನು?" ಎಂದು ಮಾತಿಗಾರಂಭಿಸಿದನು ಕಮಲಾಪ್ರಸಾದ.

ಪೂರ್ಣಾ ಒಂದು ಕ್ಷಣ ಯೋಚಿಸಿ ಮಾರ್ನುಡಿದಳು. "ತೊಂದರೆಯೇನೂ ಇಲ್ಲ. ಆದರೆ ಇಲ್ಲಿಯೂ ತಮ್ಮ ಉಪಕಾರವಿದೆಯಲ್ಲ?"

ಕಮಲಾಪ್ರಸಾದ-“ಹಾಗಾದರೆ ಇಂದೇ ಬರಬಹುದು. ತಂದೆಯವರ ಅಭಿಪ್ರಾಯವೂ ಇದೇ. ನಾನು ಹೋಗಿ, ಸಾಮಗ್ರಿಗಳನ್ನು ಹೊರುವುದಕ್ಕೆ ಕೂಲಿಗಳನ್ನು ಕಳುಹಿಸುವೆನು” ಎಂದನು.

“ಅಷ್ಟೇಕೆ ಅವಸರ? ಆಲೋಚನೆಗೆ ಸ್ವಲ್ಪ ಎಡೆ ಕೊಡಿ” ಎಂದು ಪೂರ್ಣೆಯು ಮತ್ತೇನನ್ನೂ ಆಡಲು ತಿಳಿಯದೆ ಹೇಳಿದಳು.

ಕಮಲಾಪ್ರಸಾದನು “ಇದರಲ್ಲಿ ಆಲೋಚಿಸಲೇನಿದೆ? ಒಬ್ಬಳೇ ಹೇಗಿರುವೆ? ನಮ್ಮಲ್ಲಿಗೆ ಬರಲಿಕ್ಕೇನು ಅಡ್ಡಿ?” ಎಂದು ಪುನಃ ಪ್ರಶ್ನಿಸಿದನು.

“ಅಡ್ಡಿಯೇನೂ ಇಲ್ಲ.”

“ಹಾಗಾದರೆ ಆಳುಗಳನ್ನು ಕಳುಹಿಸಲೇ?”

“ಕಳುಹಬಹುದು, ಆದರೆ ಅವಸರವೇಕೆ?”

“ಇಷ್ಟು ಸಂಕೋಚವೇಕೆ ಪೂರ್ಣಾ? ನೀನು ನಮ್ಮಲ್ಲಿ ಬಂದರೆ ಇತರರು ಏನಾದರೂ ತಿಳಿಯುವರೆಂದೆಣಿಸಿದೆಯಾ?” ಎಂದು ಕರುಣಾಂಕಿತನಾಗಿ ನುಡಿದನು ಕಮಲಾಪ್ರಸಾದ.

ಪ್ರಸಾದನ ಅನುಮಾನವು ಯಥಾರ್ಥವಾದುದೇ. ಪೂರ್ಣೆಗೆ ಅದೇ ಸಂಕೋಚವಿತ್ತು. ಆದರೆ ಹೇಳಲಿಕ್ಕಾಗಲಿಲ್ಲ. ತನ್ನ ಮನದಿಂಗಿತವನ್ನು ಅವನರಿತುದರಿಂದ ಕೊಂಚ ಲಜ್ಜಿತಳಾದಳು. ಅವನ ಮನೆಯವರಲ್ಲಿ ಅವಳಿಗೆ ಶಂಕೆಯಿದ್ದಿಲ್ಲ. ಕಮಲಾಪ್ರಸಾದನೇ ಅವಳ ಶಂಕಾನಿರಸನ ಮಾಡಿದನು.

“ಪೂರ್ಣಾ, ನಿನ್ನ ಅನುಮಾನ ಸ್ವಾಭಾವಿಕ. ಆದರೆ ನಿನ್ನನ್ನು ವಿರೋಧಿಸುವವರು ನಮ್ಮಲ್ಲಿ ಯಾರಿರುವರು? ತಂದೆಯವರದೇ ಈ ಅಭಿಪ್ರಾಯ. ನನ್ನನ್ನೆಂತೂ ನೀನೇ ತಿಳಿದಿರುವೆ. ಪಂಡಿತ ವಸಂತಕುಮಾರನಿಗೂ ನನಗೂ ಎಷ್ಟು ಮೈತ್ರಿಯಿತ್ತೆಂಬುದು ನಿನಗೆ ಹೇಳಬೇಕೇನು? ಪ್ರೇಮಕುಮಾರಿಯ ಸ್ವಭಾವವನ್ನು ನಿನಗೆ ಬೇರೆ ಹೇಳಬೇಕೆ? ತಾಯಿಗೆ ನಿನ್ನಲ್ಲಿ ಎಷ್ಟು ಪ್ರೀತಿಯಿದೆಯೆಂದು ಹೇಳಿದರೆ ಗೊತ್ತಾಗದು. ನೀನೇ ತಿಳಿದುಕೊಳ್ಳುವೆ. ಇನ್ನುಳಿದವಳು ಸುಮಿತ್ರಾ, ಅವಳಿಗೇನು ನಿನ್ನಲ್ಲಿ ಕೆಟ್ಟದಿಲ್ಲ. ಅವಳ ಮಾತನ್ನು ಯಾರು ಮಾನಿಸುತ್ತಾರೆ? ಇನ್ನೂ ಒಂದು ಮಾತಿದೆ. ಅವಳನ್ನು ಖುಶಿಪಡಿಸುವ ಉಪಾಯವಿದೆ, ಅದನ್ನು ಹೇಳಿಬಿಡುವೆನು. ಅವಳಿಗೆ ನಿನ್ನಲ್ಲಿ ಸ್ವಲ್ಪ ಅಸಮಾಧಾನವಿದೆಯೆಂದಾದೊಡನೆಯೇ ಈ ಮಂತ್ರವನ್ನುಸುರಿದೆಯೆಂದರೆ ಮತ್ತಾವ ಕಷ್ಟವೂ ಇಲ್ಲ. ಅವಳ ಸೌಂದರ್ಯವನ್ನು ಹೊಗಳಿದರಾಯಿತು—‘ನೀನು ಊರ್ವಶಿ ಅಥವಾ ರಂಭೆ’ ಎಂದರೂ ತನ್ನನ್ನು ಮಂಕು ಮಾಡುವರೆಂದು ತಿಳಿಯುವವಳಲ್ಲ. ಎಷ್ಟು ಬೇಕಾದರೂ ನೀನು ಅವಳನ್ನು

ಉಬ್ಬಿಸಬಹುದು. ಅದನ್ನು ಯಥಾರ್ಥವೆಂದೇ ನಂಬುವಳು; ಇದೇ ಮಂತ್ರದಿಂದ ನಾನವಳನ್ನು ಕುಣಿಸುತ್ತಿರುವುದು."

ಈ ಮಾತನ್ನು ಕೇಳಿ ಪೂರ್ಣಗೆ ನಗು ಬಂತು. "ಇಷ್ಟೂ ತಿಳಿಯದವಳಿದ್ದಾಳೇನು? ನೀವು ತಮಾಷೆಗೆನ್ನುವುದಾಗಿರಬೇಕು" ಎಂದಳು.

ಕಮಲಾಪ್ರಸಾದನು "ಇದು ಸಾಮಾನ್ಯದ ಮಾತಲ್ಲ. ನಮ್ಮದೇ ಹೊಗಳಿಕೆಯನ್ನು ಕೇಳಿ ನಾವೇ ಮತ್ತರಾಗುವುದಿಲ್ಲವೇ? ನಾವೇ ಏಕೆ? ಮಹಾತ್ಮರು ಕೂಡ ಪ್ರಶಂಸೆಯಿಂದ ವಿವೇಕಶೂನ್ಯರಾಗುವುದಿಲ್ಲವೇ? ಪ್ರಶಂಸೆಯ ಮಾತುಗಳಲ್ಲಿ ಭಕ್ತಿಭಾವವು ಮಾತ್ರ ಕಾಣುತ್ತಿರಬೇಕು. ಹೀಗೆಲ್ಲಾ ಆಗುವುದಿಲ್ಲವೆಂದಾದರೆ, ಕವಿಗಳ ಸುಳ್ಳಿನ ಕಂತೆಗಳಿಗೆ ರಾಜ–ಮಹಾರಾಜರು ಹೊನ್ನಿನ ರಾಶಿಯನ್ನೇ ಸುರಿಯುತ್ತಿದ್ದರೇಕೆ? ಮಾತಾಡು. ಪಿಸ್ತೂಲಿನ ಶಬ್ದವನ್ನು ಕೇಳಿದೊಡನೆಯೇ ಬೆಚ್ಚಿ ಬೀಳುವ ರಾಜರಿಲ್ಲವೆ? ಕಿವಿಗಳಲ್ಲಿ ಬೆರಳಿಟ್ಟು ಓಡುವವರಿಲ್ಲವೆ? ಆದರೆ, ದರಬಾರಿನಲ್ಲಿ ಅವರನ್ನು 'ನೀವು ದ್ರೋಣಾಚಾರ್ಯ ಅಥವಾ ಅರ್ಜುನ ಇವರಿಂದಲೂ ಹೆಚ್ಚಿನ ಶೌರ್ಯದವರೆಂ'ದು ಕವಿಗಳು ಹೇಳಿದರೆ ಮೀಸೆಯನ್ನು ಹುರಿಮಾಡುವವರಿಲ್ಲವೆ? ಒಂದೇ ಒಂದು ಕ್ಷಣ ಇವರು ತಮ್ಮನ್ನು ಹಾಸ್ಯ ಮಾಡುವರೆಂದು ಭಾವಿಸುವರೆ? ಸುಮಿತ್ರೆಯು ತನ್ನಂತಹ ಸುಂದರಿಯರು ಬೇರಾರೂ ಇಲ್ಲವೆಂದು ತಿಳಿಯುತ್ತಾಳೆ. ಅವಳಿಗೆ ಅಂತಹ ಹುಚ್ಚು ಹೇಗೆ ಬಂತೊ, ದೇವರಿಗೇ ಗೊತ್ತು. ಇದನ್ನೆಲ್ಲ ಹೇಳುವಾಗ ನನಗೆಂತಹ ದುಃಖವಾಗುತ್ತಿದೆ ಪೂರ್ಣಾ! ಅವಳಿಂದಾಗಿ ನನ್ನ ಜೀವನವೇ ಹಾಳಾಯಿತು. ಪ್ರೇಮವೆಂದು ಯಾವುದನ್ನು ಕರೆಯುವರೋ ನನಗೆ ತಿಳಿಯದು. ಈ ಪ್ರಪಂಚದಲ್ಲಿ ನನ್ನಂತಹ ಭಾಗ್ಯಹೀನರು ಯಾರೂ ಇರಲಾರರು. ಅದನ್ನೆಲ್ಲಾ ಹೇಳಿ ಪ್ರಯೋಜನವೇನು? ಇದೆಲ್ಲಾ ಪೂರ್ವಜನ್ಮದ ಕರ್ಮಫಲ. ಅವಳೊಡನೆ ಮಾತಾಡುವುದಕ್ಕೆ ನಾಲಗೆಯೇಳುವುದಿಲ್ಲ. 'ಅವನೊಬ್ಬ ನಾಡಾಡಿ, ದಿನಾಲೂ ಪ್ರಮೋದಕ್ಕಾಗಿ ಸಿನೇಮಕ್ಕೆ ಹೋಗುತ್ತಾನೆ'ಂದು ಎಲ್ಲರೂ ಹೇಳುತ್ತಾರೆ. ಆದರೆ ನಿಜಸ್ಥಿತಿ ಯಾರಿಗೂ ತಿಳಿಯಲಿಲ್ಲ. ಈಗ ನಿನ್ನಲ್ಲಿ ಹೇಳುತ್ತೇನೆ, ಪೂರ್ಣಾ! ನನ್ನ ಹಾರ್ದಿಕ ವೇದನೆಯ ಶಮನಕ್ಕಾಗಿ ಸಿನೇಮಕ್ಕೆ ಹೋಗುತ್ತೇನೆ. ಹೃದಯದ ಉರಿಯನ್ನು ಮತ್ತೆ ಯಾವ ರೀತಿಯಿಂದ ತಣಿಸಲಿ? ಒಮ್ಮೊಮ್ಮೆ ಸನ್ಯಾಸಿಯಾಗಲೇ ಎನಿಸುತ್ತದೆ. ಎನಿಸುವುದು ಮಾತ್ರವಲ್ಲ, ಒಂದು ದಿನ ಹಾಗೆ ಮಾಡಲೇ ಬೇಕಾಗುವುದು. ಇವನೆಲ್ಲಿಯ ರಗಳೆಯನ್ನು ತೆಗೆದನೆಂದು ನೀನು ಭಾವಿಸಲೂ ಬಹುದು, ಕ್ಷಮಿಸಬೇಕು. ಆರಲ್ಲಿಯೂ ಹೇಳದ ದುಃಖವನ್ನು

ನಿನ್ನಲ್ಲೇಕೆ ತೋಡಿಕೊಂಡೆನೆಂದು ನಾನರಿಯೆ. ವ್ಯಥಿತ ಹೃದಯಕ್ಕೆ ವ್ಯಥಿತ ಹೃದಯದಿಂದಲೇ ಶಾಂತಿಯು ದೊರಕಬೇಕಷ್ಟೆ ಎಂದು ತಿಳಿದುಕೊ. ಇನ್ನು ನಾನು ಹೋಗುವೆನು. ಆಳುಗಳು ಈಗಲೇ ಬರುವರು." ಎಂದು ದೊಡ್ಡ ಭಾಷಣವನ್ನೇ ಮಾಡಿ ಹೊರಟನು.

ಪೂರ್ಣೆಯ ಮನಸ್ಸು ಈಗ ಹೇಗಾಯಿತು! ಈ ಮನೆ ಬಿಡುವುದಕ್ಕೆ ಒಪ್ಪಿಗೆಯಿಲ್ಲ; ಹಾಗೆ ಹೇಳಲು ಆಗುವುದಿಲ್ಲ. ತನ್ನ ಆಕ್ಷೇಪದಿಂದ ಈತನ ದುಃಖೀ ಹೃದಯವು ಮತ್ತಷ್ಟು ದುಃಖಪಟ್ಟುಕೊಂಡೀತು ಎಂಬುದು ಇನ್ನೊಂದು ಕಾರಣ. ಮುಳುಗುವವಳಿಗೆ ಹುಲ್ಲುಕಡ್ಡಿಯ ಸಹಾಯವಾದರೂ ಮಹತ್ವದ್ದಾಗಿರುವಾಗ, ಎದುರಿಗೆ ಬಂದ ಈ ದೋಣಿಯನ್ನು ಬಿಡುವಳೇ? ಆದರೆ, ಅವಳನ್ನುದ್ಧರಿಸಲು ಬಂದ ನಾವೆಯು ಅದಾಗಿರಲಿಲ್ಲ; ಅವಳ ಆತ್ಮವನ್ನು ನುಂಗಲು ಬಂದ ವಿಚಿತ್ರ ಜಲಜಂತುವೊಂದಾಗಿತ್ತು!

---

## ೫

ಪೂರ್ಣೆಗೆ ಮನೆ ಬಿಡುವಾಗ ಬಹಳ ದುಃಖವಾಯಿತು. ಜೀವನದ ಮೂರು ವರ್ಷಗಳನ್ನು ಇಲ್ಲೇ ಕಳೆದಿದ್ದಳು. ಇಲ್ಲೇ ಸೌಭಾಗ್ಯದ ಸುಖವನ್ನು ನೋಡಿದ್ದಳು; ವೈಧವ್ಯದ ದುಃಖವನ್ನೂ ಕಂಡಳು. ಈಗ ಮನೆಯನ್ನು ಬಿಡುವುದೆಂದರೆ ಹೃದಯವು ಬಿರಿದಂತಾಗುತ್ತದೆ. ಸಾಮುಗ್ರಿಗಳನ್ನು ಹೊರುವುದಕ್ಕಾಗಿ ಆಳುಗಳು ಬಂದಾಗ ಅವಳು ಬಿಕ್ಕಿ ಬಿಕ್ಕಿ ಅತ್ತಳು. ಶವವನ್ನು ಎತ್ತಲು ಜನರು ಬಂದಾಗ ಆದಷ್ಟು ದುಃಖವು ಈಗಲೂ ಆಯಿತು. ಶವವು ಮನೆಯಲ್ಲಿರಕೂಡದು, ಆದಷ್ಟು ಬೇಗನೇ ದಹನಕ್ರಿಯೆಯಾಗಬೇಕೆಂದು ತಿಳಿದಿದ್ದರೂ, ದುಃಖವುಂಟಾಗುವುದಿಲ್ಲವೆ? ಪೂರ್ಣೆಯು ಒಂದು ಮೂಲೆಗೆ ಮುಖ ಮಾಡಿ ಅಳುತ್ತಿದ್ದಳು. ತನ್ನ ಪ್ರಾಣೇಶನ ಸ್ಮೃತಿಯ ಆಧಾರವು ಕೂಡ ಈಗ ಮರೆಯಾಗಲಿದೆ. ಆ ಮನೆಯ ಮೂಲೆ ಮೂಲೆಯು ಮಧುರ ಸ್ಮೃತಿಯಿಂದ ರಂಜಿತವಾಗಿತ್ತು. ತನ್ನ ಸೌಭಾಗ್ಯ ಸೂರ್ಯನು ಅಸ್ತನಾದ ಮೇಲೂ ಇಲ್ಲಿ ಆ ದೃಶ್ಯವು ಕಾಣುತ್ತಿತ್ತು. ಸೌಭಾಗ್ಯ ಸಂಗೀತವು ಅಂತ್ಯವಾದ ಮೇಲೂ ಪ್ರತಿಧ್ವನಿಯು ಕೇಳುತ್ತಿತ್ತು. ಗೃಹದಲ್ಲಿ ಸಂಚರಿಸುವಾಗ ತನ್ನ ಸೌಭಾಗ್ಯದ ವಿಷಾದಮಯ ಗರ್ವವಿತ್ತು. ಇಂದು ಸೌಭಾಗ್ಯ ಸೂರ್ಯನ ಅಂತಿಮ ಕಿರಣವೂ ಅದೃಶ್ಯವಾಗುವುದರಲ್ಲಿದೆ. ಸೌಭಾಗ್ಯ

ಸಂಗೀತದ ಪ್ರತಿಧ್ವನಿ ಕೂಡ ಅನಂತಶೂನ್ಯದಲ್ಲಿ ಲೀನವಾಗಲಿದೆ. ವಿಷಾದ ಮಯ ಗರ್ವವು ಹೃದಯವನ್ನು ಹರಿದು ಹೊರಟು ಹೋಗಲಿದೆ.

ಪೂರ್ಣೆಯು ಮನೆಯನ್ನು ತೊರೆಯುವಳೆಂದು ನೆರೆಯ ಸ್ತ್ರೀಯರಿಗೆ ತಿಳಿದೊಡನೆಯೇ, ಎಲ್ಲರೂ ಕಳುಹಿಕೊಡುವುದಕ್ಕಾಗಿ ಬಂದರು. ಪೂರ್ಣೆಯ ಶೀಲವು ಎಲ್ಲರನ್ನೂ ಮುಗ್ಧಗೊಳಿಸಿತ್ತು. ಅವಳ ಬಳಿ ಧನವಿದ್ದಿಲ್ಲ. ಆದರೆ ಅದಕ್ಕಿಂತಲೂ ಅಮೂಲ್ಯವಾದ ರತ್ನದಂತಿದ್ದ ಮಧುರ ವಚನವಿತ್ತು; ಪ್ರಸನ್ನ ಮುಖವಿತ್ತು; ಸಹಾನುಭೂತಿಯಿತ್ತು; ಸೇವಾಭಾವವಿತ್ತು. ಎಲ್ಲರನ್ನೂ ಅಪ್ಪಿಕೊಂಡು ಹುಡುಗಿಯು ಗಂಡನ ಮನೆಗೆ ಹೊರಟಂತೆ ಪೂರ್ಣೆಯು ಮನೆಯನ್ನು ತೊರೆದಳು. ಸಂಧ್ಯಾಸಮಯದಲ್ಲಿ ತನ್ನ ವೃದ್ಧ ಸೇವಕಿಯೊಡನೆ ಅಳುತ್ತಾ ಹೊರಟಳು. ಆಗಾಗ ತಿರುತಿರುಗಿ ತನ್ನ ಪ್ರೀತಿಯ ಮನೆಯನ್ನು ನೋಡುತ್ತಿದ್ದಳು. ತನ್ನ ಹೃದಯವು ಅಲ್ಲಿ ಉಳಿದಿದೆಯೇ ಎಂಬ ಭಾವವು ಕಾಣುತ್ತಿತ್ತು.

ಪ್ರೇಮಕುಮಾರಿಯು ಮನೆಯ ಬಾಗಿಲಲ್ಲಿ ಅವಳ ದಾರಿಕಾಯುತ್ತಿದ್ದಳು. ಪೂರ್ಣೆಯನ್ನು ಕಂಡೊಡನೆಯೇ ಓಡಿಹೋಗಿ ಅವಳನ್ನು ಅಪ್ಪಿಕೊಂಡಳು. ಈ ಮನೆಗೆ ಅವಳು ಯಾವಾಗಲೂ ಬರುತ್ತಿದ್ದಳು; ಆಮೋದ-ಪ್ರಮೋದ ಗಳಿಂದ ಕಾಲಕಳೆಯುತ್ತಿದ್ದಳು. ಆದರೆ ಇಂದು ಈ ಮನೆಗೆ ಕಾಲಿಡುವಾಗ ಸಂಕೋಚಮಯ ಗ್ಲಾನಿಯುಂಟಾಯಿತು. ತಾನು ಇಲ್ಲಿಗೆ ಬಂದುದೇ ವ್ಯರ್ಥ ವೆಂದು ಪಶ್ಚಾತ್ತಾಪಪಟ್ಟಿರಬೇಕು. ಪ್ರೇಮಕುಮಾರಿಯನ್ನಪ್ಪಿಕೊಂಡರೂ ಅವಳ ಮನಸ್ಸು ಶಾಂತವಾಗಲಿಲ್ಲ. ಅಂದು ಅವಳು ಸಖೀಭಾವದಿಂದ ಬಂದಿದ್ದಳು. ಇಂದು ಆಶ್ರಿತಭಾವದಿಂದ ಬಂದವಳು. ಅಂದು ಅವಳ ಆಗಮನ ಸಾಮಾನ್ಯವಾಗಿತ್ತು. ಅವಳ ಸ್ವಾಗತವನ್ನಾರೂ ಮಾಡುತ್ತಿದ್ದಿಲ್ಲ. ಇಂದು ಅವಳು ಬಂದೊಡನೆಯೇ ದೇವಕಿಯು ಖಜಾನೆಯ ಬಾಗಿಲನ್ನು ಹಾಕದೆಯೇ ಬಂದಳು. ಸುಮಿತ್ರೆಯು ತಲೆಬಾಚುತ್ತಿದ್ದಳು; ಅದನ್ನರ್ಧ ದಲ್ಲೇ ಬಿಟ್ಟು ಬಂದಳು. ಕೆಲಸದವರೂ ಕಾರ್ಯವನ್ನು ಕೊನೆಗಾಣಿಸದೆ ಬಂದರು. ಕಮಲಾಪ್ರಸಾದ ಮೊದಲೇ ಅಂಗಳದಲ್ಲಿ ನಿಂತಿದ್ದ. ಸಂಧ್ಯಾ ವಂದನೆಗೆ ಹೊರಟ ಲಾಲಾ ಬದರೀಪ್ರಸಾದನು ಅಲ್ಲಿಂದಲೇ ಅಂಗಳಕ್ಕೆ ಬಂದನು. ಈ ಸಮಾರೋಹವನ್ನು ನೋಡಿ, ಪೂರ್ಣೆಯ ಹೃದಯ ವಿದೀರ್ಣ ವಾಯಿತು. ಈ ಸ್ವಾಗತವು ಸನ್ಮಾನದ ಸೂಚನೆಯ ಬದಲಿಗೆ ದಯೆಯ ಚಿಹ್ನೆಯಾಗಿತ್ತು.

ದೇವಕಿಗೆ ಸುಮಿತ್ರೆಯ ಯಾವ ಮಾತೂ ಹಿಡಿಯುತ್ತಿದ್ದಿಲ್ಲ. ಅವಳ

ನಡೆ-ನುಡಿ, ನಗೆ–ನಿಲವು, ವೇಷ–ಭೂಷಣ, ಬುದ್ಧಿಹೀನತೆಯು ಚರಮ ಸೀಮೆಯ ಅತಿಕ್ರಮ ಮಾಡುತ್ತಿದೆಯೆಂದು ತೋರುತ್ತಿತ್ತು. ದೇವಕಿಯು ನಿತ್ಯ ಇವಳ ವಿಷಯವಾಗಿ ಆಲೋಚಿಸುತ್ತಿದ್ದಳು. ಅವಳ ಆಲೋಚನೆಯಲ್ಲಿ ಸದ್ಭಾವನೆಯಿತ್ತೋ, ದ್ವೇಷವಿತ್ತೋ ಹೇಳಲಸಾಧ್ಯ. ಸುಮಿತ್ರೆಯು ದ್ವೇಷವೆಂದೇ ತಿಳಿಯುತ್ತಿದ್ದಳು. ಹೀಗಾಗಿ ಮತ್ತೂ ಅವಳು ರೇಗಿಸುತ್ತಿದ್ದಳು. ದೇವಕಿಯು ಬೆಳಗ್ಗೆ ಏಳಬೇಕು ಎಂದರೆ ಇವಳು ಮಧ್ಯಾಹ್ನ ಏಳುತ್ತಿದ್ದಳು. ಮುಸುಕು ಹಾಕಿಕೊಳ್ಳಬೇಕೆಂದರೆ ಅರ್ಧ ತಲೆಯು ಕಾಣುವಂತೆ ಮುಸುಕೆಳೆಯುತ್ತಿದ್ದಳು. ದೇವಕಿಯು ಆಳುಗಳೊಡನೆ ಇರಬಾರದೆಂದರೆ, ಸುಮಿತ್ರೆ ಆಳುಗಳೊಡನೆ ಸರಸವಾಡುತ್ತಿದ್ದಳು. ವಾಸ್ತವವಾಗಿ ಪೂರ್ಣೆ ಇಲ್ಲಿಗೆ ಬರುವುದು ದೇವಕಿಗೆ ಹಿತವಿದ್ದಿಲ್ಲ. ಇದನ್ನು ಅಡಗಿಸಲಾರದೆ ಪತಿಯೊಡನೆಯೂ ಹೇಳಿದ್ದಳು. ಆದರೆ ಅವನು ಮನದಲ್ಲಿ ಉಂಟಾದ ಆಲೋಚನೆಯನ್ನು ಪೂರೈಸದೆ ಬಿಡಲಾರನೆಂದರಿತು, ಸುಮ್ಮನೆ ವಿರೋಧ ಕಟ್ಟಿಕೊಳ್ಳುವುದು ಅನುಚಿತವೆಂದು ಸುಮ್ಮನಾದಳು. ಸುಮಿತ್ರೆಯು ಅತ್ತೆಯ ಇಂಗಿತವನ್ನರಿತಿದ್ದಳು. ಪೂರ್ಣೆಯೂ ತಿಳಿಯುವಳೆಂದು ಗ್ರಹಿಸಿದ್ದಳು. ಇದರಿಂದಾಗಿ ಪೂರ್ಣೆಯಲ್ಲಿ ಸ್ನೇಹವು ಹೆಚ್ಚಾಯಿತು. ಇಂದಿನವರೆಗೆ 'ಪೂರ್ಣೆಯು ಆದರ್ಶಗೃಹಿಣಿ' ಎಂದು ದೇವಕಿ ಹೊಗಳುತ್ತಿದ್ದಳು. ಅವಳನ್ನು ತೋರಿಸಿ ಸುಮಿತ್ರೆಯನ್ನು ಲಜ್ಜಿತಳನ್ನಾಗಿ ಮಾಡಬೇಕೆಂದೆಣಿಸಿದ್ದಳು. ಆದುದರಿಂದ ಇಂದಿನ ವರೆಗೆ ಸುಮಿತ್ರೆಗೆ ಪೂರ್ಣೆಯನ್ನಾಗುತ್ತಿರಲಿಲ್ಲ. ಆದರೆ ಇಂದು ದೇವಕಿಗೂ ಆ ಭಾವವಿರಲಿಲ್ಲ. ಸುಮಿತ್ರೆಯೂ ಆ ಭಾವವನ್ನು ಬಿಟ್ಟಿದ್ದಳು.

ಇಂದು ಪೂರ್ಣೆಯು ಪ್ರೇಮಕುಮಾರಿಯೊಡನೆ ಹೆಚ್ಚು ಸಮಯ ಇರಲಿಲ್ಲ. ಅವಳ ಮನಸ್ಸು ಕ್ಷೋಭೆಗೊಂಡಿತ್ತು. ತನ್ನ ಹೀನತೆಯು ಅವಳಿಗೆ ಗೊತ್ತಾದುದು ಇಂದೇ. ಇಷ್ಟು ಬೇಗ ತನ್ನ ದಶೆಯು ಎಲ್ಲಿಂದೆಲ್ಲಿಗೆ ಬಂತೆಂದು ತಿಳಿದು ಬಂತು. ಈ ಮನೆಯು ಅವಳ ಮನೆಗಿಂತ ಎಷ್ಟೋ ಸುಂದರವಾಗಿತ್ತು. ಕೋಣೆಗಳಲ್ಲಿ ರತ್ನಕಂಬಳಿ ಹಾಸಿದೆ. ವಿದ್ಯುದ್ದೀಪವಿದೆ. ಇದು ಕಣ್ಣನ್ನು ಕುಕ್ಕುತ್ತಿದೆ. ಪಂಕದ ಗಾಳಿ ಅವಳ ಮೈಯನ್ನು ಸುಡುತ್ತದೆ. ಪ್ರೇಮಕುಮಾರಿಯ ಆಗ್ರಹದಿಂದಲೂ ಅವಳಿಗೆ ಭೋಜನವು ಬೇಡವಾಯಿತು. ಕೋಣೆಯಲ್ಲಿ ಹಾಸಿಗೆಯಲ್ಲಿ ಬಿದ್ದುಕೊಂಡು ಅಳುತ್ತಿದ್ದಳು. ವಿಧಿ ಅವಳೊಡನೆ ಎಂತಹ ಆಟವನ್ನಾಡುತ್ತಿತ್ತು! ಅವಳ ಜೀವನಸರ್ವಸ್ವವನ್ನೂ ಸೆಳೆದು, ಅವಳನ್ನು ಆಟದ ಬೊಂಬೆಯಿಂದ ರಮಿಸುತ್ತಿತ್ತು. ಅವಳ

ಬಿಡುಗಣ್ಣುಗಳನ್ನು ಕಿತ್ತು, ರಮ್ಯೋಪವನವನ್ನು ತೋರಿಸುತ್ತಿತ್ತು. ಕೈಗಳನ್ನು ಕತ್ತರಿಸಿ, ಮನಸ್ಸೇ ಈಜಾಡು ಎಂದು ಒತ್ತಾಯಿಸುತ್ತಿತ್ತು.

ಹನ್ನೆರಡು ಬಡಿದಿತ್ತು. ಪೂರ್ಣೆಯು ಕಿಟಿಕಿಯ ಬಳಿ ನಿಂತು ಹೊರಗಿನ ಅಂಧಕಾರವನ್ನು ನೋಡುತ್ತಿದ್ದಳು. ಆ ಕತ್ತಲೆಯಲ್ಲಿ ಅವಳಿಗೆ ಸುಂದರ ದೃಶ್ಯಗಳು ಕಾಣುತ್ತಿದ್ದುವು. ಅದೇ ಅವಳ ಹಂಚಿನ ಮನೆ; ಅದರೊಳಗೆ ಅದೇ ಮಂಚ; ಹೊರಗಿನ ಸಣ್ಣ ಅಂಗಳ. ಅವಳ ಪತಿ ಆಫೀಸಿನಿಂದ ಬಂದು ಮಂದಹಾಸಯುತ ಸಪ್ರೇಮನೇತ್ರಗಳಿಂದಾಕೆಯನ್ನು ನೋಡುತ್ತಾ ಕಿಸೆಯಿಂದೇನೋ ತೆಗೆದು ಪುನಃ ಅಡಗಿಸಿಡುತ್ತಾನೆ. ಅವಳು ಕುಳಿತು ಕೊಂಡು ಬೀಡ ತಯಾರಿಸುತ್ತಿದ್ದಾಳೆ. ಜಗ್ಗನೆ ಎದ್ದು ಪತಿಯ ಕೈಗಳನ್ನು ಹಿಡಿದು ಹೇಳುತ್ತಾಳೆ; "ಏನದು, ತೋರಿಸಿರಿ!" ಪತಿಯು ಕೈಗಳನ್ನು ಒತ್ತಿ ಹಿಡಿದುಕೊಂಡನು. ಅವಳ ಉತ್ಸುಕತೆಯು ಮತ್ತೂ ಹೆಚ್ಚಿತು. ಅವಳು ಬಲಹಾಕಿ ಕೈಗಳನ್ನು ಬಿಡಿಸಿದಳು. ಆದರೆ ಅದರೊಳಗೇನಿದೆ? ಬರೇ ಕೌತುಕ! ಅಹಹಾ! ಆ ಕೌತುಕ, ಆ ಕ್ರೀಡೆಯಲ್ಲಿ ತನ್ನ ಜೀವನದ ವ್ಯಾಖ್ಯೆಯು ಅಂಟಿ ಕೊಂಡಿತ್ತೆಂದು ಭಾಸವಾಯಿತು.

ಅಷ್ಟರಲ್ಲಿ ಸುಮಿತ್ರೆಯು ಬಂದು ಮಾತಾಡಿದಳು. "ಅರೆ! ನೀನು ಇನ್ನೂ ಮಲಗಿಲ್ಲ! ನಿನಗೆ ಇಷ್ಟರೊಳಗೆ ನಿದ್ದೆ ಬಂದಿರಬಹುದೆಂದು ತಿಳಿದಿದ್ದೆ." ಪೂರ್ಣೆಯು ಕಣ್ಣೀರನ್ನುಜ್ಜುತ್ತಾ "ನೀನು ಹಾಗೆಣಿಸಿದ್ದರೆ ಇಲ್ಲಿಗೆ ಬರುತ್ತಲೇ ಇರಲಿಲ್ಲ" ಎಂದಳು. ಸುಮಿತ್ರೆ ಕುಳಿತುಕೊಳ್ಳುತ್ತಾ ಮಾರ್ನುಡಿದಳು. "ನಾನು ಹಾಗೆ ಭಾವಿಸಿದ್ದೆ. ಆದರೆ ಯಾಕೆ ಬಂದೆನೆಂದು ನನಗೇ ಗೊತ್ತಿಲ್ಲ. ಇನ್ನು ಹೋಗುವೆ. ರಾತ್ರಿ ಬಹಳವಾಯಿತಲ್ಲ."

ಪೂರ್ಣೆ ಸ್ವಲ್ಪ ಆಶಂಕಿತೆಯಾದಳು. "ಇಷ್ಟರ ವರೆಗೆ ನೀನೇಕೆ ಎಚ್ಚರ ದಲ್ಲಿದ್ದೆ?"

"ಇಡೀ ದಿನ ನಿದ್ದೆ ಮಾಡುತ್ತಿದೆ."

"ಇಡೀ ದಿನ ಯಾಕೆ ನಿದ್ದೆ ಮಾಡುವೆ?"

"ರಾತ್ರಿ ಎಚ್ಚರವಾಗಿರುವುದಕ್ಕೆ" – ಇಷ್ಟು ಹೇಳಿ ಸುಮಿತ್ರೆ ನಗತೊಡಗಿ ದಳು. ಪುನಃ ಗಂಭೀರೆಯಾಗಿ ಮುಂದುವರಿಸಿದಳು; "ನನ್ನ ತಾಯಿತಂದೆ ಯರ ಧನಪಿಪಾಸೆಯ ಪ್ರಾಯಶ್ಚಿತ್ತವನ್ನನುಭವಿಸುತ್ತಿರುವೆನು" ಇಷ್ಟು ಹೇಳು ತ್ತಿರುವಾಗಲೇ ಕಣ್ಣೀರು ಕಾಣಿಸತೊಡಗಿತು.

ಪೂರ್ಣೆಗೆ ಈ ಮಾತು ಕೇಳಿ ಆಶ್ಚರ್ಯ. ಜೀವನದ ಮಧುರ ಸಂಗೀತದಲ್ಲಿ ಈ ಅಪಸ್ವರವೇಕೆ?

ಸುಮಿತ್ರೆ ಯಾವುದೋ ಅಂತರ್ವೇದನೆಯನ್ನು ಸಹಿಸುತ್ತಾ ಹೇಳಿದಳು; "ಒಂದು ದಿನ ಈ ಮನೆ ಕರಗಿಹೋಗಲಿದೆ. ಒಂದು ಸಲವಲ್ಲ, ಸರ್ತಿಸರ್ತಿಗೂ ಇದೇ ಶಾಪ ಕೊಡುವೆನು." ಪೂರ್ಣೆ ವಿಸ್ಮಿತೆಯಾದಳು; "ಇಂತಹ ಮಾತೇಕೆ ಹೇಳುತ್ತಿರುವೆ?" ಎಂದು ಪ್ರಶ್ನಿಸಿದಳು. ಮತ್ತೆ ಇನ್ನೊಂದು ವಿಷಯ ನೆನಪಾಯಿತು. "ಇನ್ನೂ ಅಣ್ಣ ಬರಲಿಲ್ಲವೆ?" ಎಂದು ಕೇಳಿದಳು.

ಸುಮಿತ್ರೆ ಬಾಗಿಲ ಕಡೆ ಭೀತನೇತ್ರಗಳಿಂದ ನೋಡುತ್ತಾ ಉತ್ತರವಿತ್ತಳು; "ಇನ್ನೂ? ಹನ್ನೆರಡಾಯಿತಷ್ಟೆ! ಇಷ್ಟು ಬೇಗ ಬರುವರೇ? ಒಂದು, ಎರಡು, ಮೂರು. ನನ್ನ ವಿವಾಹವು ಈ ಮನೆಯೊಂದಿಗಾಯಿತು. ಲಾಲಾ ಬದರೀಪ್ರಸಾದರ ಸೊಸೆಯಾಗಿದ್ದೇನೆ. ಇದರಿಂದ ಹೆಚ್ಚಿನ ಸುಖದ ಕಲ್ಪನೆಯಾದರೂ ಸಾಧ್ಯವೇ? ಭಗವಂತ ನನ್ನನ್ನೇಕೆ ಹುಟ್ಟಿಸಿದನೋ? ಈ ಮನೆಯಲ್ಲಿ ನನ್ನದಾಗಿ ಏನೂ ಇಲ್ಲ ಅಕ್ಕ. ನನ್ನ ಜೀವನ ಮರಣಗಳ ಯೋಚನೆ ಯಾರಿಗೂ ಇಲ್ಲ. ನೀನಾದರೂ ನನ್ನ ಮೇಲೆ ದಯೆಯಿಡಬೇಕೆಂಬುದೇ ನನ್ನ ಪ್ರಾರ್ಥನೆ. ತುಂಡಾದ ತಂತಿಯಿಂದ ಮಧುರನಾದವು ಹೊರಟೀತೆ? ನಿನ್ನೊಡನೆ ಏನೇನು ಹೇಳಿದೆನೋ? ಇದನ್ನೆಲ್ಲಾ ಯಾರೊಡನೆಯೂ ಹೇಳಬೇಡ. ಇದಕ್ಕಿಂತಲೂ ಹೆಚ್ಚಿನ ವಿಪತ್ತಿನಲ್ಲಿ ಸಿಲುಕಿಯೇನು? ನಾವಿಬ್ಬರೂ ದುಃಖಿಗಳೇ! ನಿನ್ನ ಹೃದಯದಲ್ಲಿ ಸುಖದ ಸ್ಮೃತಿಯಾದರೂ ಇದ್ದರೆ, ನನ್ನಲ್ಲಿ ಅದು ಕೂಡ ಇಲ್ಲ. ನಾನು ಸುಖವನ್ನು ನೋಡಿದ್ದೆ ಇಲ್ಲ. ಅದನ್ನು ಅನುಭವಿಸುವ ಆಸೆಯೂ ಇಲ್ಲ."

ಪೂರ್ಣೆಯು ನೀಳವಾದ ಉಸಿರೊಂದನ್ನು ಬಿಟ್ಟಳು. "ನನ್ನ ಮತ್ತೆ ನಿನ್ನ ಭಾಗ್ಯಗಳನ್ನು ಹೋಲಿಸಬೇಡ. ಪರಾಶ್ರಯಕ್ಕಿಂತ ಹೆಚ್ಚಿನ ವಿಪತ್ತು, ದುರ್ಭಾಗ್ಯದ ಕೋಪದೊಳಗಿದ್ದೀತೆ?" ಎಂದಳು.

ಸುಮಿತ್ರೆಯು ಒಣ ನಗು ನಕ್ಕು ಉತ್ತರವಿತ್ತಳು: "ಅದು ಕೂಡ ನನ್ನ ಭಾಗ್ಯದಲ್ಲಿಯೇ ಪೂರ್ಣಾ? ನನಗೂ ಎಲ್ಲಿಯಾದರೂ ಆಶ್ರಯ ಸಿಗುತ್ತಿದ್ದರೆ ಈ ಮನೆಯಲ್ಲಿ ಒಂದು ಕ್ಷಣವೂ ನಿಲ್ಲುತ್ತಿದ್ದಿಲ್ಲ. ನನ್ನನ್ನಿಲ್ಲಿಂದ ಕರೆಸಿರೆಂದು ತಾಯಿತಂದೆಯರಿಗೆ ಸಾವಿರಾರು ಬಾರಿ ಬರೆದೆ. ಅವರು ಮಾತ್ರ ಇತ್ತ ಕಡೆಗೆ ನೋಡಲೇ ಇಲ್ಲ. ಅವರು ಬರೆಯುವ ಉತ್ತರದಲ್ಲಿ ಉಪದೇಶದ ಕಂತೆಯೇ ತುಂಬಿದೆ. ಈ ಮನೆಯಲ್ಲಿ ಹೃದಯವಿರುವವರೆಂದರೆ ಮಾವನವರು ಮಾತ್ರ. ಬೇರೆಲ್ಲರೂ ಪಾಷಾಣಮೂರ್ತಿಗಳು. ಅವರು ಇಷ್ಟು ಹೊತ್ತು ಮೀರಿ ಬರುವುದರಲ್ಲಿ ನನಗೇನೂ ವ್ಯಸನವಿಲ್ಲ. ಒಂದು ವೇಳೆ ಅವರ ಮನಸ್ಸು

ಯಾರೊಡನಾದರೂ ನಾಟಿತೆಂದರೆ ನನ್ನ ಅರ್ಧ ಕ್ಲೇಶವು ಪರಿಹಾರವಾದಂತೆಯೇ! ಅವರಿಗೆ ಹೃದಯವಿಲ್ಲವೆಂಬುದೇ ನನಗೆ ದುಃಖ. ಹೃದಯದ ಸ್ಥಳದಲ್ಲಿ ಸ್ವಾರ್ಥದ ಕಲ್ಲನ್ನಿಟ್ಟಿದ್ದಾನೆ, ಭಗವಂತ. ಅವರಿಗೆ ಪುಸ್ತಕದಲ್ಲಿ ಪ್ರೇಮವಿಲ್ಲ; ಸಂಗೀತದಲ್ಲಿಲ್ಲ; ವಿನೋದದಲ್ಲಿಲ್ಲ. ದುಡ್ಡಿನಲ್ಲಿ ಮಾತ್ರ ಇದೆ. ಅವರಿಗೆ ಸಿನೇಮದಲ್ಲಿ ಆನಂದ ದೊರಕೀತೆಂದು ನನಗೆನಿಸುವುದಿಲ್ಲ. ಅದರಲ್ಲಿ ಏನಾದರೊಂದು ಸ್ವಾರ್ಥವಿರಬೇಕು. ಕೋಣೆಯೊಳಗೆ ಬಂದೊಡನೆಯೇ ಮೊದಲ ಪ್ರಶ್ನೆ 'ದೀಪವೇಕೆ?' ಎಂದು. ನೋಡು, ಬಂದರೆಂದು ತೋರುತ್ತದೆ. ಇನ್ನು ಒಂದೆರಡು ಗಂಟೆಗಳ ವರೆಗೆ ಮಿತವ್ಯಯದ ಉಪದೇಶವಿದೆ. ಸಂಚಯ ಮಾಡುವುದು ಅಗತ್ಯ; ಆದರೆ ಧನದಾಸನಾಗಿರಬೇಕೇಕೆ? ಅವರನ್ನು ಕೆರಳಿಸುವುದಕ್ಕಾಗಿಯೇ ನಾನು ಅಧಿಕ ವ್ಯಯಮಾಡುತ್ತಿದ್ದೇನೆ. ಅವರೆಂತೂ ಒಂದು ಪೈಯನ್ನು ಕೊಡುವವರಲ್ಲ. ನನ್ನ ದುಡ್ಡನ್ನೂ ನಾನು ಖರ್ಚು ಮಾಡಬಾರದಂತೆ. ಇರಲಿ, ನಾನೀಗ ಹೋಗುವೆನು" ಎನ್ನುತ್ತ ಸುಮಿತ್ರೆಯು ಹೊರಟುಹೋದಳು. ಪೂರ್ಣೆಯು ದೀಪ ನಂದಿಸಿ ಮಲಗಿದಳು. ಆದರೆ ನಿದ್ದೆಯೆಲ್ಲಿ ಬರುತ್ತದೆ? ಇಂದೇ ಅವಳು ಈ ಮನೆಗೆ ಕಾಲಿಟ್ಟಳು. ಆದರೆ ತನ್ನ ಅವಿಚಾರದ ಅವಸರಕ್ಕೆ ಅವಳೇ ಬೇಸರಗೊಂಡಳು. ಇಲ್ಲಿ ಅವಳು ಹೆಚ್ಚು ಕಾಲ ನಿಲ್ಲುವ ಸಂಭವವಿಲ್ಲವೆಂಬುದು ನಿಶ್ಚಯವಾಗಿತ್ತು.

---

೬

ಲಾಲಾ ಬದರೀಪ್ರಸಾದನಿಗೆ ಅಮೃತರಾಯನೊಡನೆ ಸಂಸರ್ಗವಿರುವುದೇ ಅವಮಾನಕರವಾದರೆ, ವಿವಾಹವೆಲ್ಲಿ ಸಾಧ್ಯ? ಸಮಾಜದ ಘೋರ ಅನ್ಯಾಯದ ಪಕ್ಷವಹಿಸಿ, ಅಮೃತರಾಯನು ಬದರೀಪ್ರಸಾದನ ದೃಷ್ಟಿಯಿಂದ ತಾನಾಗಿಯೇ ದೂರವಾದ. ಅವನೊಡನೆ ಯಾವ ಸಂಬಂಧವನ್ನಿಡುವುದೂ ಬದರೀಪ್ರಸಾದನಿಗೆ ಕಲಂಕವಾಗಿತ್ತು. ಅಮೃತರಾಯನನ್ನು ಬಿಟ್ಟರೆ, ದಾನಾನಾಥನ ಹೊರತು ಬೇರಾರೂ ಯೋಗ್ಯ ಕನ್ಯಾರ್ಥಿಯು ಕಾಣಲಿಲ್ಲ. ದೂರದಿಂದ ಹುಡುಕಬಹುದೆಂದರೆ, ಅಷ್ಟು ಅವಕಾಶವೂ ಇಲ್ಲ. ಅಮೃತರಾಯನಿಗಾಗಿ ಇಷ್ಟು ಕಾಲ ಕಳೆದಾಯಿತು. ಅಲ್ಲಲ್ಲಿ ಬಂಧುಗಳು "ಈಗಲೇ ಹುಡುಗಿ ಬೆಳೆದು ನಿಂತಳು" ಎಂದು ಹೇಳತೊಡಗಿರುವರು. ಹೊಸ ಸಂಬಂಧವನ್ನು ಹುಡುಕಲು ಇಷ್ಟೇ ಸಮಯ ತಗಲಬಹುದೆಂದು ಹೇಳಲು ಸಾಧ್ಯವಿಲ್ಲ. ಹೀಗೆಲ್ಲಾ ಇರುವುದರಿಂದ ದಾನಾನಾಥನಲ್ಲೇ ಮಾತು ಬೆಳೆಸುವುದೆಂದು ನಿಶ್ಚೈಸಿದನು. ದೇವಕಿಯೂ ಏನೂ ಅಡ್ಡಿಮಾಡಲಿಲ್ಲ. ಪ್ರೇಮಾ ಮಾತ್ರ ಈ ವಿಷಯದಲ್ಲಿ ಉದಾಸೀನತೆಯನ್ನು ತೋರಿಸಿದಳು. ಈಗ ಅವಳಿಗೆ ಎಲ್ಲಾ ಪುರುಷರೂ ಸಮಾನರೇ! ಯಾರೊಡನೆಯೂ ಜೀವನವನ್ನು ಸಾಗಿಸಬಹುದು. ಅವಳಾದರೋ ಅವಿವಾಹಿತೆಯಾಗಿರುವುದನ್ನೇ ಬಯಸುತ್ತಾಳೆ. ಆದರೆ ಇದು ಸಾಧ್ಯವೇ? ಕುಲಕ್ಕೆ ಅವಮಾನವಲ್ಲವೇ? ಅಲ್ಲದೆ ದುರಾಗ್ರಹ ಮಾಡಿ ತಾಯಿ ತಂದೆಗಳ ಮನಸ್ಸನ್ನು ನೋಯಿಸಲು ಅವಳು ಆಶಿಸುವುದಿಲ್ಲ. ಯಾವ ದಿನ ಅಮೃತರಾಯನು ಪ್ರತಿಜ್ಞೆಯನ್ನು ಮಾಡಿದನೋ, ಅಂದಿನಿಂದಲೇ ಇನ್ನು ತನಗೆ ಜೀವನದಲ್ಲಿ ಸುಖದ ಆಶೆಯಿಲ್ಲವೆಂದು ತಿಳಿದಿದ್ದಳು. ಆದರೆ ಅವಿವಾಹಿತೆಯಾಗಿದ್ದು ಎಲ್ಲರ ಹಾಸ್ಯಕ್ಕೆ ಗುರಿಯಾಗುವುದಕ್ಕಿಂತ ಯಾರನ್ನಾದರೂ ಮದುವೆಯಾಗುವುದು ಮೇಲಷ್ಟೆ! ಮೂರು ವರ್ಷಗಳ ಮೊದಲು ದಾನಾನಾಥನೊಡನೆ ಮದುವೆಯ ಮಾತುಕತೆ ನಡೆದುದು ಅವಳಿಗೆ ಗೊತ್ತಿತ್ತು. ಮಧ್ಯದಲ್ಲೊಂದು ಬದಲಾವಣೆಯಾಗದಿದ್ದರೆ, ಅವಳಿಂದು ದಾನಾನಾಥನ ಮನೆಯವಳಾಗಿರುತ್ತಿದ್ದಳು. ದಾನಾನಾಥನನ್ನು ಅವಳೆಷ್ಟೋ ಸಲ ನೋಡಿದ್ದಳು. ಅವನು ರಸಿಕ, ಸಜ್ಜನ, ವಿದ್ವಾಂಸ ಎಂಬುದೂ ಅವಳಿಗೆ ತಿಳಿದಿದೆ. ಕಾಣುವುದಕ್ಕೂ ಗಟ್ಟಿಮುಟ್ಟಿನ ಆಳು. ಬ್ರಹ್ಮಚರ್ಯದ ಕಾಂತಿಯು ಮುಖದಲ್ಲಿ ಮಿರುಗುತ್ತಿದೆ. ಅವನಿಗೆ ತನ್ನಲ್ಲಿ ಪ್ರೇಮವಿದೆಯೆಂಬುದೂ ಅರಿಯದುದಲ್ಲ. ಆದರೂ ತನ್ನ ಮನಸ್ಸೇಕೆ ಅವನಿಂದ ತಿರುಗಿ, ಅಮೃತರಾಯ

ನೆಡೆಗೆ ಹರಿಯುತ್ತಿದೆಯೆಂಬುದಕ್ಕೆ ಅವಳಲ್ಲಿ ಉತ್ತರವಿಲ್ಲ. ಆದರೆ ಈಗ ಅವಳಿಗೆ ಯಾವ ಉಪಾಯವೂ ಇಲ್ಲ. ಇಂದಿನ ವರೆಗೆ ಅವಳು ದಾನಾನಾಥ ನನ್ನು ಈ ಬಗೆಯ ದೃಷ್ಟಿಯಿಂದ ನೋಡಿದವಳಲ್ಲ. ಮನಸ್ಸಿನಲ್ಲೇ ಒಂದು ಸಂಕಲ್ಪ ಮಾಡಿದ್ದಳು. ಈಗ ಹೃದಯದಲ್ಲಿ ಆ ಸ್ಥಾನವು ಶೂನ್ಯವಾದುದ ರಿಂದ, ಆ ಸ್ಥಳದಲ್ಲಿ ದಾನಾನಾಥನನ್ನು ಕುಳ್ಳಿರಿಸಿಕೊಳ್ಳುವುದರಲ್ಲಿ ಅವಳಿಗೆ ಕ್ಷೋಭೆಯಾಗಲಿಲ್ಲ. ದಾನಾನಾಥನನ್ನು ಪ್ರೀತಿಸುವುದು ಅಸಾಧ್ಯವೆಂದೂ ತೋರಲಿಲ್ಲ. ಬದರೀಪ್ರಸಾದನು ವಿವಾಹಕ್ಕೆ ಪ್ರೇಮಕುಮಾರಿಯ ಸಮ್ಮತಿ ಯನ್ನು ಹಾರೈಸಿದನು. ಅವಳ ಅನುಮತಿ ದೊರೆತೊಡನೆಯೇ ದಾನಾನಾಥ ನಿಗೆ ಸಂದೇಶವನ್ನು ಕಳುಹಿಸಿದನು.

ದಾನಾನಾಥ ಅವ್ಯವಸ್ಥಿತಚಿತ್ತನಾದ. ಈ ಸಂದೇಶ ದೊರೆತೊಡನೆಯೇ ಅವನು ಆನಂದತುಂದಿಲನಾಗಬೇಕಿತ್ತು; ಆದರೆ ಹಾಗಾಗಲಿಲ್ಲ. ಅದಕ್ಕೆ ತನ್ನ ಸಮ್ಮತಿಯನ್ನು ಬರೆದು ಕಳುಹಿಸುವುದಕ್ಕೇ ಅವನಿಗೆ ಒಂದು ವಾರ ಹಿಡಿಯಿತು. ಆ ವರೆಗೆ ತರತರದ ಚಿಂತೆಯುಂಟಾಗಿತ್ತು.– ತಾನು ಪ್ರೇಮ ಕುಮಾರಿಯನ್ನು ಪ್ರಸನ್ನೆಯಾಗಿರಿಸಬಲ್ಲೆನೇ? ಅವಳ ಹೃದಯದಲ್ಲಿ ಅಧಿ ಕಾರವನ್ನು ಪಡೆದೇನೇ? ಜೀವನವು ಭಾರವೆನಿಸದಷ್ಟೆ? – ಅವನ ಹೃದಯವು ಈ ಪ್ರಶ್ನೆಗಳಿಗೆ ಸಂತೋಷಪ್ರದ ಉತ್ತರವನ್ನೇ ಕೊಡುತ್ತಿತ್ತು. ಆದರೆ ತಾನು ಹೀಗೆ ಮಾಡುವುದು ನ್ಯಾಯಬಾಹಿರವೆಂದು ತಿಳಿಯುತ್ತಿದ್ದನು. ತನ್ನ ಪ್ರಾಣ ಸಖನ ತ್ಯಾಗದಿಂದ ತಾನು ಸಂತೋಷಪಡುವುದು ನೀಚತನವೆಂದೆಣಿಸು ತ್ತಿದ್ದನು. ತಾನು ಪ್ರೀತಿಸಿದಷ್ಟು ಅಮೃತರಾಯನು ಅವಳನ್ನು ಪ್ರೀತಿಸಲಾರ ನೆಂದು ಗ್ರಹಿಸುತ್ತಿದ್ದನು. ಅವಳ ವಿನಾ ತನ್ನ ಜೀವನವು ಶೂನ್ಯ–ನಿರುದ್ದಿಷ್ಟ ವೆಂದು ಭಾಸವಾಗುತ್ತಿತ್ತು. ಸೇವೆ, ಪ್ರಚಾರ ಮತ್ತು ಆಂದೋಲನಗಳು ಅವನ ಸ್ವಭಾವವಿರುದ್ಧವಾಗಿದ್ದವು. ಕೀರ್ತಿಯ ಅಭಿಲಾಷೆಯೂ ಅವನಿ ಗಿದ್ದಿಲ್ಲ, ನಿಷ್ಕಾಮಕರ್ಮವು ಎಷ್ಟೋ ದೂರದ ಮಾತು.

ಒಮ್ಮೆ ಅಮೃತರಾಯನನ್ನು ಕಾಣಬೇಕೆಂದು ನಿಶ್ಚೈಸಿದನು. ಇನ್ನು ಕೂಡ ಅವನು ತನ್ನ ನಿರ್ಧಾರವನ್ನು ಬದಲಿಸಿದರೆ, ದಾನಾನಾಥನಿಗೆ ಅದರಿಂ ದೇನೂ ವ್ಯಸನವಿಲ್ಲ. ಜೀವನದ ಸುಖವೆಂಬುದು ಅಭಿಲಾಷೆಯಲ್ಲಿದೆ. ಈ ಅಭಿಲಾಷೆಯು ಈಡೇರಿದರೆ ಬೇರೊಂದು ಉಪಸ್ಥಿತವಾಗುವುದು. ಯಾವು ದಾದರೊಂದು ಅಪೇಕ್ಷೆಯು ಇದ್ದೇ ತೀರುವುದೆಂದ ಮೇಲೆ, ಇಂದಿನ ಅಭಿ ಲಾಷೆಯೇ ಏಕಿರಬಾರದು? ಇದಕ್ಕಿಂತ ಆನಂದಪ್ರದವಾದ ಅಭಿಲಾಷೆ ಬೇರೆಯಿದೆಯೇ? ಇಷ್ಟೇ ಅಲ್ಲ, ಜೀವನದ ಈ ಅಭಿನಯವು ವಿಯೋಗಾಂತ

ವಾಗುವ ಭಯವೂ ಇದೆ. ಪ್ರಥಮ ಪ್ರೇಮವು ಅದೆಷ್ಟು ಅಸಹನೀಯ ವೆಂದು ಅವನಿಗೆ ಗೊತ್ತು.

ಇತ್ತೀಚೆಗೆ ಕಾಲೇಜಿಗೆ ರಜೆಯಿದೆ. ಆದರೆ ದಾನಾನಾಥನು ಡಾಕ್ಟರ್ ಉಪಾಧಿಗಾಗಿ ಒಂದು ಗ್ರಂಥವನ್ನು ಬರೆಯಲು ಕಾಲೇಜಿಗೆ ಹೋಗುತ್ತಿದ್ದ. ಭೋಜನ ತೀರಿಸಿ ಹೊರಡುವುದು ಅವನ ಕ್ರಮ. ಅಲ್ಲಿ ಪುಸ್ತಕಾಲಯದಲ್ಲಿ ದೊರೆಯುವ ಸೌಕರ್ಯವು ಮನೆಯಲ್ಲಿ ಸಿಗುತ್ತಿದ್ದಿಲ್ಲ. ಇಂದು ಅವನು ಇಡೀ ದಿನ ಪುಸ್ತಕಾಲಯದಲ್ಲಿ ಕುಳಿತರೂ, ಒಂದು ಗೆರೆಯನ್ನೂ ಬರೆಯ ಲಾಗಲಿಲ್ಲ. ಇಂದಿನ ವರೆಗೆ ಯೋಚಿಸುತ್ತಿದ್ದ ಆ ದುಸ್ತರ ಕಾರ್ಯವನ್ನು ಇಂದು ಪೂರೈಸುವುದೆಂದು ನಿಶ್ಚಯಿಸಿದನು. ಏನೆಲ್ಲಾ ಮಾತುಕತೆಯಾಗ ಬಹುದೆಂದು ಆಲೋಚಿಸುತ್ತಾ ಅಮೃತರಾಯನ ಬಂಗ್ಲೆಗೆ ತಲಪಿದನು. ಸೂರ್ಯದೇವನು ಪತ್ರ–ಪುಷ್ಪಗಳ ಮೇಲೆ ತನ್ನ ಅಂತಿಮ ಪ್ರಸಾದವಾಗಿ ಸ್ವರ್ಣವರ್ಷವನ್ನು ಮಾಡುತ್ತಾ ಹೊರಟುಹೋಗುವುದರಲ್ಲಿದ್ದನು. ಕುದುರೆ ಗಾಡಿಯು ಬಾಗಿಲಲ್ಲಿ ಸಿದ್ಧವಾಗಿತ್ತು. ಆದರೆ ಅಮೃತರಾಯನಿರಲಿಲ್ಲ. ಆಳಿ ನೊಡನೆ ಕೇಳಿದ ಮೇಲೆ ಕೋಣೆಯಲ್ಲಿರುವನೆಂದು ಗೊತ್ತಾಯಿತು. ಕೋಣೆಯ ಬಾಗಿಲ ತೆರೆಯನ್ನು ಸರಿಸುತ್ತಾ ಹೇಳಿದನು– "ನಿನಗೆ ಸೆಕೆ ಯಾಗುವುದಿಲ್ಲವೆ? ಇಲ್ಲಿ ಉಸಿರು ಬಿಡುವುದೇ ಕಷ್ಟವಾಗುತ್ತಿರುವಾಗ, ನೀನು ತಪಸ್ಸು ಮಾಡುತ್ತಿರುವೆ." ಪ್ರಕಾಶದ ಒಂದು ಸೂಕ್ಷ್ಮರೇಖೆಯು ಬಿದಿರಿನ ತಡಿಕೆಯ ಮೂಲಕ ಪ್ರವೇಶಿಸಿ ದಾನಾನಾಥನ ಮುಖದ ಮೇಲೆ ಬಿತ್ತು. ಅಮೃತರಾಯನು ಆಶ್ಚರ್ಯಪಟ್ಟನು. ಅವನ ಮುಖವು ಪೀತವರ್ಣ ವಾಗಿತ್ತು. ೮–೧೦ ದಿವಸಗಳ ಹಿಂದೆ ಇದ್ದ ಕಾಂತಿಯು ಈಗ ಇಲ್ಲ. ಅಮೃತರಾಯನು ದಾನಾನಾಥನ ಸ್ವಾಗತ ಮಾಡಿದನು. ಎಷ್ಟೋ ಹೊತ್ತಿನ ವರೆಗೆ ಅವರೊಳಗೆ ಸರಸಸಲ್ಲಾಪ ನಡೆಯಿತು. ಕಡೆಗೆ ಅಮೃತರಾಯನು– "ಲಾಲಾ ಬದರೀಪ್ರಸಾದನಲ್ಲಿಂದ ಏನಾದರೂ ಆಮಂತ್ರಣ ಬಂದಿದೆಯೇ? ಕೆಲವು ದಿವಸಗಳಿಂದ ನಿನ್ನನ್ನು ಕಾಣಲೇ ಇಲ್ಲ. ನೀನು ಅಲ್ಲಿಯೇ ಇರುವೆ ಯೆಂದೇ ಭಾವಿಸಿರುವೆನು" ಎಂದನು.

ಅಮೃತರಾಯನು ಈ ಪ್ರಸಂಗವನ್ನೆತ್ತಿ ದಾನಾನಾಥನಿಗೆಷ್ಟೋ ಉಪ ಕಾರವನ್ನು ಮಾಡಿದನು. ಇಲ್ಲವಾದರೆ ಈತ ಎಷ್ಟೋ ಸಮಯದ ವರೆಗೆ ಬೇರೆ ವಿಷಯ ಮಾತಾಡಿ ಹಿಂದಿರುಗುವುದರಲ್ಲಿದ್ದ. ಬಹಳ ಸಂಕೋಚ ದಿಂದ– "ಹಾಂ. ಸಂದೇಶ ಬಂದೂ ಇತ್ತು. ಅದಕ್ಕೆ ಉತ್ತರವನ್ನೂ ಕಳುಹಿಸಿದ್ದೆ" ಎಂದುಬಿಟ್ಟನು.

"ಏನೆಂದು?"

"ನನ್ನ ಮನಸ್ಸಿಗೆ ಕಂಡ ಹಾಗೆ."

"ಹೇಳು, ನಿನ್ನ ಮನಸ್ಸಿನಲ್ಲೇನಿತ್ತೆಂದು ತಿಳಿಯೋಣ!"

"ನನಗೆ ಒಪ್ಪಿಗೆಯಿಲ್ಲವೆಂದು."

"ಇದೇಕೆ? ಪ್ರೇಮಾ ನಿನಗೆ ತಕ್ಕವಳಲ್ಲವೇ?"

"ಹಾಗಲ್ಲ, ನಾನೇ ಅವಳಿಗೆ ತಕ್ಕ ವರನಲ್ಲ."

ಅಮೃತರಾಯನ ಸ್ವರ ತೀವ್ರವಾಯಿತು. "ನೀನು ತಕ್ಕವನಲ್ಲವಾದರೆ ಇಷ್ಟು ದಿನಗಳ ವರೆಗೇಕೆ ಅವಳಿಗಾಗಿ ತಪಸ್ಸು ಮಾಡುತ್ತಾ ಇದ್ದೆ? ಮಧ್ಯ ದಲ್ಲಿ ನಾನೊಬ್ಬ ಬಾರದಿರುತ್ತಿದ್ದರೆ ಇಷ್ಟರೊಳಗೆ ನಿಮ್ಮ ವಿವಾಹವಾಗುವುದ ರಲ್ಲಿ ಸಂದೇಹವಿತ್ತೆ? ನೀನು ಈ ಶೋಕದಲ್ಲಿ ನಿನ್ನ ಜೀವನವನ್ನು ನೀಗಿಸುವೆ ಯೆಂದು ನನಗೆ ಗೊತ್ತಿಲ್ಲವೇ? ನಾನು ನನ್ನ ಹೃದಯವನ್ನರಸಿ ನೋಡಿದೆ; ನಾನು ಈ ವಿಯೋಗವನ್ನು ಸಹಿಸಿಕೊಂಡೇನು; ನಿನ್ನಿಂದ ಸಾಧ್ಯವಿಲ್ಲವೆಂದು ಆಗ ತಿಳಿಯಿತು. ಇನ್ನು ನೀನು ಏನನ್ನೂ ಹೇಳದೆ ನನ್ನ ಕುದುರೆಗಾಡಿಯಲ್ಲಿ ಕುಳಿತು ಬದರೀಪ್ರಸಾದನಲ್ಲಿ ಹೋಗಿ ನಿಶ್ಚಯ ಮಾಡಿಕೊಂಡೇ ಬರಬೇಕು. ಅಡ್ಡಿ ಹೇಳಿದರೆ ನಿನ್ನ ಕಿವಿಹಿಡಿದೇನು" ಎಂದು ಬಿರುಸಾಗಿ ನುಡಿದನು.

ದಾನಾನಾಥನು ಮಿಂಚುದೀವಿಗೆಯ ಗುಂಡಿಗೆಯನ್ನೊತ್ತುತ್ತಾ—"ನೀನು ತಿಳಿದಷ್ಟು ಸುಲಭದ ಕಾರ್ಯವಲ್ಲವಿದು; ಅದರಲ್ಲೂ ನನಗೆ!" ಎಂದನು.

ಅಮೃತನು "ಅದನ್ನು ನಾನು ಬಲ್ಲೆ. ಸುಲಭವಲ್ಲವೆಂಬುದಕ್ಕೆ ಸಂದೇಹ ವಿಲ್ಲ. ಮೊದಲು ನಾನು ವಿಘ್ನವಾಗಿದ್ದೆ. ಈಗಲೂ ನಾನೇ ಅಡ್ಡಿ. ಆದರೆ ನಾನಾವ ಮಾತನ್ನು ನಿಶ್ಚಯಿಸಿದ್ದೇನೋ, ಅದು ದೃಢವೆಂದು ನಿನಗರಿಯದೆ? ಈಗ ಬ್ರಹ್ಮನೇ ಇಳಿದು ಬಂದರೂ ನನ್ನ ವಿಚಾರವು ಬದಲಾಗದು. ಪಂಡಿತ ಅಮರನಾಥನ ಮಾತು ನನ್ನ ಹೃದಯಕ್ಕೆ ನಾಟಿದೆ. ಪ್ರೇಮಾ ಒಬ್ಬಳಲ್ಲ, ಮತ್ತಾರೊಡನೆಯೂ ನನಗೆ ವಿವಾಹಾಧಿಕಾರವಿಲ್ಲ. ಅಧಿಕಾರವನ್ನು ದೇವರು ನನ್ನಿಂದ ಸೆಳೆದುಕೊಂಡನು. ಪ್ರೇಮಕುಮಾರಿಯಂತಹ ದುರ್ಲಭವ್ಯಕ್ತಿಯು ಕೈಗೆ ಬಂದ ಮೇಲೂ ಬಿಡುವುದೆಂದರೆ ಎಂತಹ ದುಸ್ತರಕಾರ್ಯವೆಂಬುದು ನನಗೊಬ್ಬನಿಗೇ ಗೊತ್ತು. ಸ್ವಲ್ಪ ನಿನಗೂ ತಿಳಿದಿರಬೇಕು. ಈ ಶೋಕದಿಂದ ನನ್ನ ಪ್ರಾಣವು ಹೊರಟುಹೋಗುವುದಾದರೂ ಹೋಗಲಿ. ಆದರೂ ಜೀವಂತ ನಾಗಿರುವಷ್ಟು ಕಾಲ ಪ್ರೇಮಕುಮಾರಿಯನ್ನು ಸ್ವೀಕರಿಸಲಾರೆ. ಈಗ ಲಾದರೂ ನೀನು ನಿಶ್ಚಿಂತನಾದೆಯಾ?" ಎಂದನು.

ದಾನಾನಾಥನು ನಿಶ್ಚಿಂತನಾಗಲಿಲ್ಲ. ಅವನ ಮನಸ್ಸಿನಲ್ಲಿ ನೂರಾರು ಅಡ್ಡಿಗಳಿದ್ದುವು. ಆದುದರಿಂದ, "ನನ್ನಂತಹ ಅಲ್ಪನನ್ನು ಅವಳು ವರಿಸಿ ಯಾಳೆ?" ಎಂದನು.

ಅಮೃತರಾಯನು ಗಹಗಹಿಸಿ ನಕ್ಕನು. "ಅಹಹಾ! ಏನು ಆಲೋಚನೆಯಿದು! ಒಪ್ಪುತ್ತೇನೆ; ಅರೆ ಮೂರ್ಖ, ಬದರೀಪ್ರಸಾದನು ನಿನಗೆ ಹೇಳಿ ಕಳುಹಿಸಿದ್ದೇ ಪ್ರೇಮಕುಮಾರಿಯ ಒಪ್ಪಿಗೆಯಿಂದ ಎಂದು ನೀನು ತಿಳಿಯ ಬೇಡವೇ? ನಿಶ್ಚಯವಾಗದೆ ನಿನಗೆಂದೂ ಹೇಳಿಕಳುಹಿಸುತ್ತಿರಲಿಲ್ಲ. ಹುಡುಗಿಗೆ ಉಚ್ಚ ಶಿಕ್ಷಣವನ್ನು ಕೊಡುವ ಪ್ರಾಯಶ್ಚಿತ್ತವನ್ನು ಅವನು ಹೊಂದಲೇ ಬೇಕು. ಕೆಲವು ವಿಷಯಗಳಲ್ಲಿ ಅವನು ನಮಗಿಂತಲೂ ಮುಂದುವರಿದವ, ಕೆಲವು ವಿಷಯಗಳಲ್ಲಿ ನಮಗಿಂತಲೂ ಹಿಂದೆ. ವಿಧವಾವಿವಾಹವು ಅವನ ದೃಷ್ಟಿಯಲ್ಲಿ ಘೋರ ಪಾಪವಾಗಿದೆ. ಆದರೆ ಹುಡುಗಿಯ ಒಪ್ಪಿಗೆಯಿಲ್ಲದೆ ಮದುವೆಯ ಮಾತಿಗೆ ತೊಡಗುವಷ್ಟು ಹಿಂದುಳಿದವನಲ್ಲ. ನಿನ್ನ ಈ ಶಂಕೆಯು ಬುಡವಿಲ್ಲದ್ದೆಂಬುದು ಸಿದ್ಧ. ಒಂದು ವೇಳೆ ಆಕೆಗೆ ನಿನ್ನಲ್ಲಿ ಪ್ರೇಮ ವಿರಲಾರದು ಎಂದು ನೀನು ಶಂಕಿಸುತ್ತಿದ್ದರೆ, ಆಗಬಹುದಿತ್ತು. ಆದರೆ ಈ ಶಂಕೆಯಿಂದಾಗಿ ಪ್ರೇಮಕುಮಾರಿಗೆ ಅನ್ಯಾಯ ಮಾಡಿದಂತಾಗುವುದು. ಅವಳು ಕುಲದ ಮರ್ಯಾದೆಯಲ್ಲಿ ಆಸಕ್ತಿಯಿರುವ ಆರ್ಯರಮಣಿ. ಅವಳ ಪ್ರೇಮವೆಂದರೆ 'ಪತಿಪ್ರೇಮ'. ಪ್ರೇಮದ ಬೇರೆ ರೂಪವು ಅವಳಿಗೆ ಗೊತ್ತಿಲ್ಲ. ಅದನ್ನು ತಿಳಿಯುವ ಸಾಹಸಕ್ಕೂ ಹೋಗಲಾರಳು. ನನ್ನನ್ನು ಭಾವೀಪತಿಯೆಂದು ತಿಳಿದುದರಿಂದ ನನ್ನಲ್ಲಿ ಅವಳಿಗೆ ಪ್ರೇಮವಿತ್ತು. ಇಂತಹ ವ್ಯರ್ಥವಾದ ಶಂಕೆಯಿಂದ ಅಮೂಲ್ಯ ಸಮಯವನ್ನು ಕಳೆಯುತ್ತಿರುವೆ. ವಿವಾಹ ಲಗ್ನವು ಕಳೆದುಹೋದರೆ ಮತ್ತೊಂದು ವರ್ಷ ಆಸೆಯಿಂದಲೇ ಕಳೆಯ ಬೇಕಾಗುವುದು" ಎಂದು ಬೋಧಿಸಿದನು.

ದಾನಾನಾಥನು ಚಿಂತೆಯಲ್ಲಿ ಮುಳುಗಿದನು. ಅವನ ಶಂಕೆಗಳೆಲ್ಲಾ ನಿರ್ಮೂಲವಾದರೂ, ಇನ್ನೂ ಹೇಳಲಾರದ ಎಷ್ಟೋ ಮಾತುಗಳು ಮನಸ್ಸಿನಲ್ಲಿ ನಾಟಿದ್ದುವು. ಅವಳ ರೂಪವು ಅವ್ಯಕ್ತ ಮತ್ತು ಅಲಕ್ಷಿತ. ಶಂಕೆಗಳು ಶರ್ತಗಳೆದುರಲ್ಲಿ ಸೋತರೂ ನಿರ್ಮೂಲವಾಗದವುಗಳೂ ಕೆಲವಿರುತ್ತವೆ. ಮಿತ್ರನಲ್ಲಿ ವಿಶ್ವಾಸಘಾತವಿದೆಯೆಂದು ಶಂಕಿಸುತ್ತಿದ್ದನು.

ಅಮೃತರಾಯನು ಗಂಟೆ ಬಾರಿಸಿದನು. ಒಬ್ಬ ವೃದ್ಧನು ಬಂದನು. ಅಮೃತರಾಯನು ದಾನಾನಾಥನ ಹೆಸರಲ್ಲಿ ಒಂದು ಪತ್ರವನ್ನು ಬರೆದು, "ಇದಕ್ಕೆ ಸಹಿ ಹಾಕು" ಎಂದನು.

ದಾನಾನಾಥನು ಕಿಟಿಕಿಯ ಬಳಿ ನಿಂತು ಧೂಮ್ರಪಾನ ಮಾಡುತ್ತಿದ್ದವನು ಕೇಳಿದನು; "ಏನು ಕಾಗದ?"

"ಓದಬಾರದೆ? ಮುಂದಿದೆಯಲ್ಲ?"

"ನನ್ನೆದೆಗೆ ಚೂರಿ ಹಾಕುತ್ತಿರುವೆ" ಎಂದನು ಕಾಗದವನ್ನೋದಿ.

"ಮಾತಾಡದೆ ಸಹಿ ಹಾಕು. ನನಗೊಂದು ಸಭೆಗೆ ಹೋಗಲಿದೆ. ತಡವಾಗುವುದು."

"ದಿನಾಲೂ ಇಂತಹ ರಗಳೆಯಿಲ್ಲದಂತಾಗಲು ನನ್ನನ್ನು ಕೊಂದುಬಿಡ ಬಾರದೇಕೆ?"

"ಈಗ ಅಡ್ಡಿ ಹೇಳಬೇಡ. ಹೇಳಿದರೆ ಇನ್ನೆಂದೂ ನಿನ್ನ ಮುಖವನ್ನೇ ನೋಡಲಾರೆ."

ಈ ಹೆದರಿಕೆಯು ತನ್ನ ಕಾರ್ಯವನ್ನು ಮಾಡಿತು. ದಾನಾನಾಥನು ಪತ್ರಕ್ಕೆ ರುಜುಮಾಡಿ ಕೆರಳಿಕೊಂಡು ಹೇಳಿದನು—"ಇಂದು ವಿಷವನ್ನಾದರೂ ತಿನ್ನದಿರಲಾರೆ."

ಅಮೃತರಾಯನು ಪತ್ರವನ್ನು ಕವರಿನೊಳಗಿಟ್ಟು ವೃದ್ಧನಿಗೊಪ್ಪಿಸಿ; "ಬದರೀಪ್ರಸಾದನಿಗೊಪ್ಪಿಸು." ಎನ್ನುತ್ತಲೇ ಮುದುಕನು ಮುಗುಳು ನಗುತ್ತಾ ಪತ್ರದೊಂದಿಗೆ ನಡೆದನು.

ಅಮೃತರಾಯನು ನಗುತ್ತಾ "ವಿಷವು ನಿನ್ನ ಬಳಿ ಇಲ್ಲವಾದರೆ ನಾನು ಕೊಡುವೆನು; ಯಾವುದೋ ಮದ್ದಿಗಾಗಿ ತರಿಸಿದುದು ನನ್ನಲ್ಲಿದೆ. ಸ್ವಲ್ಪ ಕೊಡಲೇ?" ಎಂದು ಕೇಳಿದನು.

"ನಿನ್ನ ತಲೆಯೊಡೆಯುತ್ತೇನೆ. ನೀನು ಎಂದಿನಿಂದಲೂ ನನ್ನ ಮೇಲೆ ಅಧಿಕಾರ ನಡೆಯಿಸುವೆ; ಈಗಲೂ ನಡೆಯಿಸುತ್ತಿರುವೆ. ಆದರೆ, ಜಾಗ್ರತೆ! ಇಂದಿನಿಂದ ನಿನ್ನ ಅಧಿಕಾರವು ನನ್ನಲ್ಲಿ ನಡೆಯಲಾರದು. ನಾನು ಕೂಡ ಒಂದು ವ್ಯಕ್ತಿ." ದಾನಾನಾಥನ ಸಿಟ್ಟಿನ ಮಾತಿದು. ಆದರೆ ಅಮೃತರಾಯನಿಗೆ ತನ್ನ ನಗುವನ್ನು ತಡೆಯಲಾಗಲಿಲ್ಲ. ಆತನ ನಗುವಿನಿಂದಾಗಿ ಮತ್ತಷ್ಟು ಸಿಟ್ಟಿಗೆದ್ದ ದಾನಾನಾಥನು ದುರುಗುಟ್ಟಿಕೊಂಡು ಅಮೃತರಾಯನನ್ನು ನೋಡುತ್ತಾ ಕೋಣೆಯನ್ನು ಬಿಟ್ಟು ಹೊರನಡೆದನು.

---

೭

ಲಾಲಾ ಬದರೀಪ್ರಸಾದನಿಗೆ ದಾನಾನಾಥನ ಪತ್ರ ದೊರೆತುದೇ ತಡ, ಆಘಾತದೊಂದಿಗೆ ಅವಮಾನವೂ ದೊರಕಿದಂತಾಯಿತು. ಆ ಪತ್ರದ ನಮ್ರತೆ, ವಿನಯುಗಳು ಆ ಲಿಪಿಯಿಂದಾಗಿ ಲೋಪವಾಗಿತ್ತು. ಕ್ರೋಧದಿಂದ ಅವನ ಮಸ್ತಿಷ್ಕವು ಕೆಂಡವಾಯಿತು. "ಅಮೃತನೊಡನೆ ಪತ್ರ ಬರೆಯಿಸುವುದಕ್ಕೆ ದಾನಾನಾಥನ ಕೈ ಮುರಿದಿತ್ತೇನು? ಇಲ್ಲಿಯ ವರೆಗೆ ಬರಲು ಅವನ ಕಾಲಿಗೆ ಮುಳ್ಳು ನಾಟಿತ್ತೇ? ಅಮೃತರಾಯನು ಎಂತಹ ನಿರ್ಲಜ್ಜ! ಇಂತಹ ಪತ್ರ ಬರೆಯಲು ನಾಚಿಕೆಯೂ ಆಗಲಿಲ್ಲವೇ?" ಎಂದು ಕೆರಳಿ ನುಡಿದನು.

ಇಷ್ಟರ ವರೆಗೆ ಒಂದು ಆಶೆಯಿತ್ತು. ಇದೆಲ್ಲಾ ಅಮೃತರಾಯನ ಆವೇಶದಿಂದಾದ ಪ್ರತಿಜ್ಞೆ. ಇಂದಲ್ಲ, ನಾಳೆಯಾದರೂ ಶಿಥಿಲವಾದೀತು ಎಂದು; ಪತ್ರದ ಬರವಣಿಗೆಯನ್ನು ನೋಡಿ, ಒಂದು ವೇಳೆ ಅಮೃತರಾಯನೇ ತನ್ನ ತಪ್ಪಿಗೆ ಕ್ಷಮೆಯಾಚಿಸಿರಬಹುದೆಂದು ಗ್ರಹಿಸಿದನು. ಪತ್ರವನ್ನು ಓದಿದಂತೆಯೇ ಆ ಆಶೆಯ ಕುಡಿ ಮುರುಟಿತು. ದಾನಾನಾಥನ ಪತ್ರವು ಬಂದೊಡನೆಯೇ ಆ ಪತ್ರವನ್ನು ಅಮೃತರಾಯನಿಗೆ ತೋರಿಸಿ, ಮತ್ಸರವನ್ನು ಕೆರಳಿಸಿ, ಪ್ರತಿಸ್ಪರ್ಧಿಯನ್ನಾಗಿ ಮಾಡಬೇಕೆಂದು ಅವನ ಆಶೆಯಿದ್ದಿರಬೇಕು. ಆ ಆಶೆಯೂ ಹಾರಿಹೋಯಿತು. ಅಮೃತನ ಅಕ್ಷರವು ಬೆಂಕಿಯಲ್ಲಿ ಉಪ್ಪನ್ನು ಹಾಕಿದಂತಾಯಿತು. ಕ್ರೋಧದಿಂದ ಕಂಪಿಸುವ ಕೈಯಿಂದ ದಾನಾನಾಥನಿಗೊಂದು ಪತ್ರ ಬರೆಯತೊಡಗಿದನು.

"ಲಾಲಾ ದಾನಾನಾಥ, ನೀನು ನಿನ್ನ ಪತ್ರವನ್ನು ಅಮೃತರಾಯನಿಂದ ಬರೆಯಿಸಿ, ನನ್ನ ಮತ್ತು ಪ್ರೇಮಕುಮಾರಿಯ ಆದರವನ್ನು ಎಷ್ಟು ಉತ್ತಮ ರೀತಿಯಲ್ಲೆಸಗಿದೆಯೆಂದು ನೀನು ಊಹಿಸಲಾರೆ. ನಿನ್ನ ಆ ಪತ್ರವನ್ನು ಹರಿದು ಬಿಸಾಡಿ, ನಿನಗೆ ಯಾವ ಉತ್ತರ ಬರೆಯದಿರುವುದೂ ಉತ್ತಮವಾಗಿತ್ತು. ಆದರೆ . . . . ."

ಇಷ್ಟು ಬರೆಯುವಾಗ ದೇವಕಿಯು ಬಂದಳು. ಅವಳು ಉತ್ಸುಕತೆಯಿಂದ "ಬಾಬೂ ಅಮೃತರಾಯನೇನು ಬರೆದಿರುವನು?" ಎಂದು ಕೇಳಿದಳು. ಬದರೀಪ್ರಸಾದನು ಕಾಗದವನ್ನೇ ನೋಡುತ್ತಾ "ಅಮೃತರಾಯನ ಪತ್ರವೇ ಬರಲಿಲ್ಲ" ಎಂದನು. ದೇವಕಿಯು "ಪತ್ರ ಹೇಗೆ ಬಾರದಿರುವುದು? ಅಮೃತರಾಯನ ಆಳು ಪತ್ರ ಹಿಡಿದುಕೊಂಡು ಬಂದುದನ್ನು ಕೋಣೆಯೊಳಗಿಂದ ನಾನೇ ನೋಡಿದ್ದೇನೆ?" ಎಂದಳು.

"ಆಳು ಅವನಲ್ಲಿಯುವನೇ! ಆದರೆ, ಕಾಗದವು ದಾನಾನಾಥನದು. ಅದಕ್ಕೀಗ ಉತ್ತರ ಬರೆಯುತ್ತಿದ್ದೇನೆ. ಆ ಮಹಾಶಯನು ಅಮೃತರಾಯ ನಿಂದ ಬರೆಯಿಸಿ ತನ್ನ ದಸ್ಕತು ಮಾತ್ರ ಹಾಕಿದ್ದಾನೆ. ತನ್ನ ಕೈಯಿಂದ ಬರೆಯುತ್ತಿದ್ದರೆ, ನಾಚಿಕೆಯಾಗುತ್ತಿತ್ತು! ಅಸಭ್ಯ!"

"ಕಾಗದದಲ್ಲೇನಿದೆ?"

ಬದರೀಪ್ರಸಾದನು ಸಿಟ್ಟಿನಿಂದ "ಓದಬಾರದೆ? ನೋಡುತ್ತಿರುವೆ ಯೇಕೆ?" ಎಂದನು. ದೇವಕಿಯು ಪತ್ರವನ್ನೋದಿ ಮಾತಿಗೆ ತೊಡಗಿದಳು.

"ಇದರಲ್ಲಿ ಅಷ್ಟು ಸಿಟ್ಟಾಗುವ ಮಾತೆಲ್ಲಿದೆ? ಇದಕ್ಕೆ ನೀವು ಬರೆದ ಉತ್ತರವೇನು, ನೋಡೋಣ?"

"ನೋಡು, ಈಗ ತೊಡಗಿದ್ದೆನಷ್ಟೆ!"

ದೇವಕಿಯು ಬದರೀಪ್ರಸಾದನು ಬರೆದ ಕಾಗದವನ್ನು ಓದಿ ಹರಿದೊಗೆದಳು. ಬದರೀಪ್ರಸಾದನಿಗೆ ಸಿಟ್ಟು ಬಂತು. "ಹರಿದೆಯೇಕೆ? ನನ್ನ ಕಾಗದವನ್ನೂ ಹರಿಯುವಷ್ಟು ಧೈರ್ಯವೆ?"

"ಇಂತಹ ಕಾಗದ ಬರೆಯಲೂ ಧೈರ್ಯವೆ? ಅಮೃತರಾಯನನ್ನು ಕಳೆದುಕೊಂಡು ಸಂತೋಷವಾದುದು ಸಾಲದುದಕ್ಕೆ ದಾನಾನಾಥನನ್ನೂ ಕಳೆದುಕೊಳ್ಳುವ ಆಲೋಚನೆಯೆ? ಈ ಪತ್ರವನ್ನು ಅವನಿಗೆ ಕಳುಹಿಸಿದರೆ ಅವನೆಂದೂ ನಿಮ್ಮ ಮುಖವನ್ನು ಸಹ ನೋಡಲಾರ. ಏನಾದರೆ ನಿಮಗೇನು? ಹಾಳಾಗುವುದು ನನ್ನ ಹುಡುಗಿಯಷ್ಟೆ?" ಎಂಬ ದೇವಕಿಯ ಉತ್ತರದಿಂದ ಬದರೀಪ್ರಸಾದನಿಗೆ ಆವೇಶವು ಸ್ವಲ್ಪ ಕಡಿಮೆಯಾಯಿತು.

"ಹುಡುಗಿ ನಿನ್ನದೇ, ನನ್ನದೇನೂ ಅಲ್ಲ" ಎಂದನು.

"ನಿಮ್ಮದಾಗಿದ್ದರೆ ಹೀಗೆ ಮಾಡುತ್ತಿದ್ದಿರೇ? ನಿಮ್ಮ ಆಲೋಚನೆಯಂತೆ ಬೇರೆ ಯೋಗ್ಯ ವರರಾರಿದ್ದಾರೆ?"

"ಪ್ರಪಂಚದಲ್ಲಿ ವರರ ಕೊರತೆಯೇನೂ ಇಲ್ಲ."

"ಆಗಿರಬಹುದು. ಆದರೆ ಹತ್ತಿರ ಎಲ್ಲೂ ಕಾಣುವುದಿಲ್ಲ. ಹೊರಗಿನ ವಿಷಯ ನಾನು ಹೇಳಬೇಕೆಂದಿಲ್ಲ. ಸೂಡಿ ಕಟ್ಟಿಕೊಂಡು ಹುಡುಕತೊಡಗಿದ ಮೇಲೇ ತಿಳಿದೀತು."

"ಅವನಿಗೆ ಅವನ ಕೈಯಿಂದಲೇ ಬರೆಯುವುದಕ್ಕೇನಾಯಿತು? ಎಂದೇ ನನಗೆ ಕಾಣುತ್ತದೆ. ಹೀಗೆ ಮಾಡಿದರೆ ನನಗೆ ಅನಾದರವಾದಂತಾಗುವುದೆಂದು ಅವನು ತಿಳಿಯಬೇಡವೇ? ಪರೀಕ್ಷೆಗಳನ್ನೆಲ್ಲಾ ಪಾಸಾಗಿ ಡಾಕ್ಟರನಾಗಲು ಹೊರಟಿದ್ದಾನೆ. ಆದರೂ ಇನ್ನೂ ಬುದ್ಧಿಯಿಲ್ಲ. ಸ್ಪಷ್ಟ ಹೇಳುವು

ವಾದರೆ ಇಬ್ಬರೂ ಕೂಡಿ ನನ್ನನ್ನವಮಾನಿಸಬೇಕೆಂದೇ ಯೋಚಿಸಿದುದು."

"ನಿಮ್ಮ ಅವಮಾನ ಮಾಡುವುದೇ ಅವರ ಕೆಲಸವೇ? ಒಟ್ಟಾರೆ, ನಿಮ್ಮ ತಲೆಯೊಳಗೆ ಒಂದೇ ಹೊಕ್ಕು ಕುಳಿತಿದೆ. ಬ್ರಹ್ಮದೇವನು ಬುದ್ಧಿಯನ್ನು ಹಂಚುವ ಸಮಯ ನೀವು ಎಲ್ಲಿ ಹೋಗಿದ್ದಿರಿ? ಪ್ರಾಯ ಐವತ್ತಾದರೂ ನಿಮಗೆ ಇಷ್ಟು ಸಣ್ಣ ಮಾತೇ ಅರ್ಥವಾಗುವುದಿಲ್ಲವೇ?"

ಬದರೀಪ್ರಸಾದನು ನಗುತ್ತಾ "ನಿನ್ನನ್ನು ಹುಡುಕಹೋಗಿದ್ದೆ." ಎಂದನು.

ದೇವಕಿಯು ಅರೆಮುದುಕಿಯಾಗಿದ್ದರೂ ವಿನೋದಶೀಲೆಯಾಗಿದ್ದಳು. "ವಾಹ! ನಾನು ಮೊದಲೇ ಹೋಗಿ, ಕೆಲವು ಪಾಲು ಹಿಡಿದುಕೊಂಡು ಹೋಗಿದ್ದೆ. ಆದ್ದರಿಂದಲೇ ಅವರಿಬ್ಬರೊಳಗೆ ಎಷ್ಟು ಮೈತ್ರಿಯಿದೆಯೆಂದು ನನಗೆ ಗೊತ್ತಿದೆ. ದಾನಾನಾಥನಿಗೆ ಸಂಕೋಚದಿಂದಾಗಿ ಬರೆಯಲು ಬಾರ ದಾಗಿದ್ದಿರಬೇಕು. ಅಮೃತರಾಯನು ಲಾಲಾಜಿಯು ಬೇರೆ ವರನನ್ನು ನಿಶ್ಚಯಮಾಡದಿರಲೆಂದು ಯೋಚಿಸಿ, ಈ ಕಾಗದವನ್ನು ತಾನೇ ಬರೆದು, ಒತ್ತಾಯದಿಂದ ರುಜುಮಾಡಿಸಿರಬೇಕು." ಎಂದಳು.

ಬದರೀಪ್ರಸಾದ– ಇಷ್ಟು ನನಗೂ ಗೊತ್ತಿದೆ. ನಾನೇನು ಅಷ್ಟೂ ಮೂಢನೆ? ನಾನು ಮೊದಲೇ ದಾನಾನಾಥನೊಡನೆ ಪ್ರೇಮಕುಮಾರಿಯ ವಿವಾಹವೇಕೆ ಮಾಡಲಿಲ್ಲವೆಂದು ಬೇಸರವಾಗುತ್ತಿದೆ. ಇಷ್ಟರ ವರೆಗೆ ಅಮೃತರಾಯನನ್ನು ನಂಬಿ ಕುಳಿತುದು ವ್ಯರ್ಥವಾಯಿತು.

ದೇವಕಿ– ಮುಂದಾಗುವುದು ಯಾರಿಗೆ ಗೊತ್ತು? ಸತ್ಯ ಹೇಳುವು ದಾದರೆ ದಾನಾನಾಥ ಪ್ರೇಮಕುಮಾರಿಯ ತಪಸ್ಸನ್ನೇ ಮಾಡುತ್ತಿದ್ದ. ಅವನಿಗೆ ಎಲ್ಲೆಲ್ಲಿಂದ ಜಾತಕಗಳು ಬಂದಿಲ್ಲ? ತಾಯಿ ಎಷ್ಟು ಹೇಳಿ ಅಳಲಿಲ್ಲ? ಬಂಧು ಗಳೆಷ್ಟು ಹೇಳಿದರು? ಯಾರು ಹೇಳಿದರೂ ಅವನೊಪ್ಪಲಿಲ್ಲ!

ಬದರೀಪ್ರಸಾದ–ಪ್ರೇಮಾ ಅವನನ್ನೊಪ್ಪಿಯಾಳೇ ಎಂಬುದನ್ನು ನಿಶ್ಚಯ ಮಾಡು. ನಾನು ಮಾತುಗೊಡುವುದು ಮತ್ತೆ ಪ್ರೇಮಾ ಒಪ್ಪದಿರುವುದು! ಹೀಗಾಗಬಾರದು. ಅವಳ ಅನುಮತಿಯೇ ಮುಖ್ಯ.

ದೇವಕಿ - ನೀವೇನು ಹೇಳುವುದಿದು? ಅವಳೊಪ್ಪದಷ್ಟು ದೋಷವೇನಿದೆ ಅವನಲ್ಲಿ? ಸಾವಿರಕ್ಕೊಬ್ಬ. ಅವಳೊಡನೆ ಕೇಳುವುದೇ ಬೇಡ. ನೀವು ಕಾಗದ ಬರೆಯಿರಿ. ಮನಸ್ಸು ವಶದಲ್ಲಿರುವ ವಸ್ತುವಲ್ಲ. ಮೊದಲು ನನ್ನ ಮನಸ್ಸು ನೆರೆಯ ವಕೀಲನನ್ನು ಮದುವೆಯಾಗಬೇಕೆಂದಿತ್ತು. ಅವನು ಕೋಟು ಧರಿಸಿ ಗಾಡಿಯಲ್ಲಿ ಕುಳಿತು ಕೋರ್ಟಿಗೆ ಹೋಗುವುದನ್ನು ನೋಡು ವಾಗ ನನ್ನ ಮನಸ್ಸು ಮುಗ್ಧವಾಗುತ್ತಿತ್ತು. ಆದರೆ ತಂದೆತಾಯಿಗಳು ನಿಮಗೆ

ವಿವಾಹಮಾಡಿ ಕೊಟ್ಟರಲ್ಲ? ಒಂದೆರಡು ದಿನ ಬೇಸರವಿತ್ತು. ಮತ್ತೆ ಅವನ ಕಡೆ ಮನಸ್ಸೇ ಓಡಲಿಲ್ಲ. ನೀವು ಯಾವುದರಲ್ಲೂ ವಕೀಲನಿಗೆ ಸಮಾನರಲ್ಲ. ಆದರೆ ನನ್ನ ಮದುವೆಯಾದ ಮೇಲೆ ಕನಸ್ಸಿನಲ್ಲಾದರೂ ಅವನ ಕಡೆಗೆ ಮನಸ್ಸು ಹರಿಯಿಸಲಿಲ್ಲವೆಂದು ಆಣೆಯಿಡುತ್ತೇನೆ.

ಬದರೀಪ್ರಸಾದ– ಓಹೋ! ಹೀಗಾಗಿ ನೀನು ಆಗಾಗ ತಾಯಿಮನೆಗೆ ಹೋಗುತ್ತಿದ್ದುದು! ಈಗ ತಿಳಿಯಿತು.

ದೇವಕಿ– ನನ್ನನ್ನು ಏನು ಹೇಳಲೂ ಬಿಡುವುದಿಲ್ಲವಲ್ಲ?

ಬದರೀಪ್ರಸಾದ– ನೀನು ನಿನ್ನ ಕತೆ ಹೇಳಿದಂತೆ ನಾನು ನನ್ನ ಕತೆಯನ್ನು ಹೇಳುವೆನು, ಕೇಳು. ನನಗೂ ಒಬ್ಬ ಮುಸಲ್ಮಾನ ಸ್ತ್ರೀಯೊಡನೆ ಪ್ರೇಮವಿತ್ತು. ಮುಸಲ್ಮಾನನಾಗಲೂ ಸಿದ್ಧನಿದ್ದೆ. ರಂಗು–ರೂಪಿನಲ್ಲಿ ಅಪ್ಸರೆಯಾಗಿದ್ದಳವಳು. ಅವಳ ಕಾಲಿನ ಧೂಳಿನ ಯೋಗ್ಯತೆಯೂ ನಿನಗಿಲ್ಲ. ನನಗೆ ಈಗಲೂ ಅವಳ ನೆನಪಾಗುತ್ತದೆ.

ದೇವಕಿ– ಎಲ್ಲಿಯ ಸುಳ್ಳಿದು? ನಾನು ಬಂದೊಡನೆಯೇ ಇಡೀ ದಿವಸ ಮಾತಾಡುತ್ತಿದ್ದಿರಿ? ಮುಸಲ್ಮಾನ ಹುಡುಗಿಯಲ್ಲಿ ಪ್ರೀತಿಯಿತ್ತಂತೆ! ನಿಮ್ಮನ್ನವಳು ಪೇಟೆಯಲ್ಲಿ ಮಾರುತ್ತಿದ್ದಳು.

ಬದರೀಪ್ರಸಾದ– ಪ್ರೇಮಾ ಒಮ್ಮೆ ಇಲ್ಲಿ ಬರಲಿ; ಕರೆ. ಅವಳೊಡನೆ ಕೇಳಿಬಿಡೋಣ.

ದೇವಕಿ– ಕೇಳುವುದೇನು? ಅವಳು ಹೇಳುವುದೇನು? ಇದೊಂದೂ ನನಗೆ ತಿಳಿಯುವುದಿಲ್ಲ. ಈ ವಿಷಯವನ್ನೆತ್ತಿದೊಡನೆಯೇ 'ತಾನು ಮದುವೆಯಾಗುವುದಿಲ್ಲವೆ'ಂದಾಳು. ಆದರೆ ನೀವು ಯಾರೊಡನೆ ನಿಶ್ಚಯಮಾಡುವಿರೋ, ಅವನನ್ನು ಮದುವೆಯಾಗದೆ ಇರಲಿಕ್ಕಿಲ್ಲ.

ಬದರೀಪ್ರಸಾದ– ಒಂದು ವೇಳೆ ನಾವು ನಿಶ್ಚಯಿಸಿದ್ದು ಅವಳಿಗೆ ಒಪ್ಪಿಗೆಯಿಲ್ಲದಿದ್ದರೆ? ಕೂಗಿ ಕೂಗಿ ಪ್ರಾಣಬಿಟ್ಟರೆ?

ದೇವಕಿ– ಹಾಗೆ ಮಾಡಲಾರಳು. ಅವಳಿಗೆ ಕರ್ತವ್ಯಜ್ಞಾನವಿದೆ. ಆದರೆ ಅವಳಿಷ್ಟರ ವರೆಗೆ ಭಾವೀಪತಿಯೆಂದು ತಿಳಿದವನನ್ನು ಮನಸ್ಸಿನಿಂದ ತ್ಯಜಿಸುವುದು ಅಷ್ಟು ಸುಲಭವಲ್ಲ.

ಬದರೀಪ್ರಸಾದ– ನಾನೇ ಒಮ್ಮೆ ಅವಳನ್ನು ಮಾತಾಡಿಸಿದರೇನು? ಓದಿದ ಹುಡುಗಿಯರ ಕ್ರಮವೇ ಬೇರೆಯಾಗಿದೆ. ಒಂದು ವೇಳೆ ಅವರ ಕರ್ತವ್ಯ ಪ್ರೇಮಗಳು ಒಂದುಗೂಡದಿದ್ದರೆ ಅವರ ಜೀವನವಿಡೀ ವ್ಯರ್ಥವಾಗುವುದು. ಅವರು ಪ್ರೇಮ ಮತ್ತು ಕರ್ತವ್ಯಗಳನ್ನು ತ್ಯಾಗಮಾಡಲು

ಇಚ್ಛಿಸರು; ತಿಳಿಯರು. ಪ್ರೇಮ ಕರ್ತವ್ಯಗಳು ಒಂದಾದರೆ ಅವರ ಜೀವನವು ಆದರ್ಶವಾಗುವುದು. ಇಂತಹ ಸ್ವಭಾವವೇ ಅವಳದ್ದಾಗಿರಬೇಕು. ನನ್ನಿಂದ ಯಾವ ಅಡ್ಡಿಯೂ ಇಲ್ಲ.

ಅಷ್ಟರಲ್ಲಿ ಅಲ್ಲಿಗೆ ಬಂದ ಕಮಲಾಪ್ರಸಾದನು "ಬಾಬೂ ಅಮೃತರಾಯನು ವನಿತಾಶ್ರಮವೊಂದನ್ನು ತೆರೆಯುವನಂತೆ. ಹಣ ಗಳಿಸುವ ನವೀನೋಪಾಯವಿದು" ಎಂದನು. ಬದರೀಪ್ರಸಾದನು ಆಲೋಚನಾಭಂಗಿಯಲ್ಲಿ ಕೇಳಿದನು—"ಹಣ ಗಳಿಸುವ ಉಪಾಯ? ಹೇಗೆ? ನನಗೆ ತಿಳಿಯಲಿಲ್ಲ?"

ಕಮಲಾಪ್ರಸಾದ– ಅವನೇ ಲೀಡರಂತೆ. ವನಿತಾಶ್ರಮದಲ್ಲಿ ವಿಧವೆಯರನ್ನು ಸೇರಿಸಿಕೊಳ್ಳುವರಂತೆ. ಅವರಿಗೆ ಅಲ್ಲಿ ಶಿಕ್ಷಣದ ಏರ್ಪಾಡಿದೆಯಂತೆ. ವಂತಿಗೆಯ ರೂಪದಲ್ಲಿ ಹಣ ಬಂದೀತು. ಅದರಿಂಡ ಅವನಿಗೆ ಮೆರೆಯಬಹುದಲ್ಲ! ಎಲ್ಲೆಲ್ಲಿಂದ ಎಷ್ಟೆಷ್ಟು ಹಣ ಬಂದಿದೆಯೆಂದು ಯಾರಿಗೆ ಗೊತ್ತು? ಏನೇನಾದರೂ ಸುಳ್ಳು ಲೆಕ್ಕ ಬರೆದರಾಯಿತು. ಯಾರೋ ಒಬ್ಬ ಬಹಳ ಕೊಡುವವನಿದ್ದಾನೆಂದು ಸುದ್ದಿ. ಐದು ಲಕ್ಷವೋ ಏನೋ ಆಗಿರಬೇಕು. ಅದರಲ್ಲಿ ಸ್ವಲ್ಪ ಅವನಿಗೆ.

ದೇವಕಿ– ಅವನು ಪರೋಪಕಾರಕ್ಕಾಗಿ ತನ್ನದನ್ನೆಲ್ಲಾ ಕಳೆದುಕೊಂಡಿರುವಾಗ, ಇದೊಂದು ಉತ್ಪಾದನೆಗಾಗಿ ರಚಿಸಿದ ಜಾಲವೆಂದು ನೀನು ಗ್ರಹಿಸುವೆ. ನಿನ್ನಿಂದೇನೂ ಆಗದಿದ್ದರೆ ಸುಮ್ಮನಿರು. ಬೇರೆಯವರದಕ್ಕೇಕೆ ಅಡ್ಡಿಯಾಗುವೆ? ಹೀಗೆ ಮಾಯಾಜಾಲ ರಚಿಸಬೇಕೆಂದೇನವನಿಗೆ? ದೇವರು ಅವನಿಗೇನೂ ಕೊಟ್ಟಿಲ್ಲವೆ?

ಕಮಲಾಪ್ರಸಾದ– ಇದರಲ್ಲಿ ಜಗಳವೇಕೆ? ಕೆಲವೇ ದಿನಗಳಲ್ಲೆಲ್ಲವೂ ತಿಳಿದೀತು. ನಿಮ್ಮಂತಹ ಸರಳಜೀವಿಗಳಿಲ್ಲವಾದರೆ, ಇಂತಹ ಧೂರ್ತರನ್ನು ಕೇಳುವವರಾರು?

ದೇವಕಿ– ಸಾಕು, ಸುಮ್ಮಗಿರು. ಇಂತಹ ಮಾತುಗಳನ್ನಾಡುವುದಕ್ಕೆ ನಿನಗೆ ನಾಚಿಕೆಯಾಗುವುದಿಲ್ಲವೆ? ಪ್ರೇಮಕುಮಾರಿಯೆದುರಿಗೆಲ್ಲಾದರೂ ಇಂತಹ ಕೈಕಾಲಿಲ್ಲದ ಮಾತುಗಳನ್ನಾಡಬೇಡ. ನೀನು ಒಮ್ಮೆ ಅವಳೆದುರಲ್ಲಿ ಅವನನ್ನು ಸುಳ್ಳನೆಂದಿದ್ದಾಗ ಅವಳು ಮೂರು ದಿನಗಳ ತನಕ ಉಣ್ಣದಿದ್ದುದು ನೆನಪಿದೆಯೇ?

ಕಮಲಾಪ್ರಸಾದನು "ನಾನು ಸುಳ್ಳು ಹೇಳುವುದೇ ಇಲ್ಲ. ಅವನು ಮಾಡುವುದನ್ನು ಹೇಳಬಾರದೆ? ಅವನು ನಮ್ಮ ಅಪಮಾನ ಮಾಡುವಾಗ, ನಾವು ಅವನನ್ನು ಪೂಜಿಸಬೇಕೆ? ಅವನು ಮಾಡುವ ತಪ್ಪನ್ನು ಮುಚ್ಚಲು

ನಮಗೇನಾಗಬೇಕಾತ? ಅವನನ್ನು ಪೇಟಿಯಲ್ಲಿ ತಲೆಯೆತ್ತದಂತೆ ಮಾಡುವೆ" ಎಂದು ಹೇಳಿ ಹೊರಟುಹೋದನು. ಅದೇ ಸಮಯಕ್ಕೆ ಪ್ರೇಮಾ ಬಂದಳು. ಅವಳ ರೆಪ್ಪೆಗಳು ಒದ್ದೆಯಾಗಿದ್ದವು. ಬಹುಶಃ ಅಳುತ್ತಿದ್ದಿರಬೇಕು. ಅವಳ ದೇಹವೂ ಯಾವುದೋ ಪೆಟ್ಟು ತಾಗಿದಂತೆ ಕೃಶವಾಗಿತ್ತು. ಮುಖವು ಮಲಿನವಾಗಿತ್ತು. ಅವಳು ಬರುವಾಗಲೇ ಮಾತಿಗಾರಂಭಿಸಿದಳು. "ಅಪ್ಪಾ, ದಾನಾನಾಥನು ಭಾವನವರನ್ನು ಹಳಿಯುತ್ತಾ ತಿರುಗುತ್ತಾನಂತೆ. ಅವನಿಗೆ ಸ್ವಲ್ಪ ಬುದ್ಧಿ ಹೇಳಬೇಕು."

ಬದರೀಪ್ರಸಾದ- (ವಿಸ್ಮಯದಿಂದ) ಯಾರು? ದಾನಾನಾಥ? ಅವನೇಕೆ ಅಮೃತರಾಯನನ್ನು ಹಳಿಯುವನು? ಅವರೊಳಗಿನ ಮೈತ್ರಿಯು ಇತರರಾರಲ್ಲಿಯೂ ಇರದು!

ಪ್ರೇಮಾ– ಹೀಗೆ ಅಣ್ಣನೇ ಹೇಳಿದ. ವನಿತಾಶ್ರಮವನ್ನು ತೆರೆಯುವ ಆಲೋಚನೆಯು ಭಾವನವರಿಗೆ ಮೊದಲೇ ಇತ್ತು. ನನ್ನಲ್ಲಿ ಎಷ್ಟೋ ಬಾರಿ ಹೇಳಿರುವರು. ಆದರೆ "ವನಿತಾಶ್ರಮದ ಹೆಳೆಯಿಂದ ಹಣ ಜಮಾಯಿಸುತ್ತಾನೆ"ಂದು ದಾನಾನಾಥನು ಅಪಪ್ರಚಾರ ಮಾಡುವನಂತೆ.

ಬದರೀಪ್ರಸಾದ– ಯಾರು? ಕಮಲಾ ಹೇಳಿದ್ದೆ?

ಪ್ರೇಮಾ- ಹೌದು, ಅವನೇ ಹೇಳಿದ. ನೀವು ದಾನಾನಾಥನನ್ನು ಕರೆದು ಕೇಳಿರಿ.

ಬದರೀಪ್ರಸಾದ– ಕಮಲಾ ಹೇಳಿದ್ದೇ ಸುಳ್ಳು. ದಾನಾನಾಥನು ಹಾಗೆಂದೂ ಹೇಳಲಾರ. ಅಮೃತರಾಯನಿಗಾಗಿ ಪ್ರಾಣ ತ್ಯಜಿಸಲೂ ಸಿದ್ಧನಾತ. ಆ ವ್ಯಕ್ತಿಯೆಂದರೆ ಮುತ್ತು. ಎಂತಹ ನಮ್ರತೆ! ಇದೆಲ್ಲಾ ಕಮಲಾನದೇ ಕಾರಸ್ಥಾನ.

ದೇವಕಿ– ಎಂತಹ ಅರಳುಮೋರೆ! ಯಾವಾಗ ನೋಡಿದರೂ ನಗುತ್ತಿದ್ದಾನೆ! ಅವನು ನಗದಿರುವುದನ್ನು ನಾನೆಂದೂ ನೋಡಿಲ್ಲ! ನಿಜವಾಗಿಯೂ ಮುಗ್ಧಸ್ವಭಾವ; ಅಭಿಮಾನವೆಂಬುದು ಅವನ ಬಳಿ ಸುಳಿಯಲೇ ಇಲ್ಲ!

ಬದರೀಪ್ರಸಾದನು ಈಗ ಡಾಕ್ಟರನು ರೋಗಿಯನ್ನು ಪರೀಕ್ಷೆಗೆ ತಯಾರು ಮಾಡುವಂತೆ ತನ್ನ ಮನಸ್ಸಿನಲ್ಲಿರುವ ವಿಷಯವನ್ನು ಕೇಳುವುದಕ್ಕೆ ಇದೇ ತಕ್ಕ ಸಮಯವೆಂದು ತಿಳಿದು "ನೋಡು ಪ್ರೇಮಾ, ದಾನಾನಾಥನೊಂದು ಪತ್ರ ಬರೆದಿರುವನು, ನೋಡು. ಇದರ ವಿಷಯ ನಿನ್ನೊಡನೆ ಚರ್ಚಿಸಬೇಕೆಂದು ನಿನ್ನ ಬಳಿಗೆ ಹೊರಡುವಾಗ ನೀನೇ ಬಂದೆ" ಎಂದನು.

ಪತ್ರದ ಆಶಯವನ್ನು ಪ್ರೇಮಾ ಕೂಡಲೇ ತಿಳಿದಳು. ಅವಳ ಎದೆ

ದಡದಡಿಸತೊಡಗಿತು. ಅವಳು ನಡುಗುಗೈಯಿಂದ ಕಾಗದವನ್ನೆತ್ತಿದಳು. ಆದರೆ ಇದೇನು ರಹಸ್ಯ? ಬರೆಹವು ಅಮೃತರಾಯನದು. ಅವಳ ಕಣ್ಣುಗಳು ತುಂಬಿಬಂದುವು. ಲಕೋಟೆಯ ಮೇಲೆ ಈ ಅಕ್ಷರವನ್ನು ಕಾಣುತ್ತಿದ್ದಾಗ ಅವಳ ಹೃದಯ ಎಷ್ಟು ತುಂಬುತ್ತಿತ್ತು! ಆದರೆ ಇಂದು ಅದೇ ಅಕ್ಷರ ಮುಳ್ಳಿನಂತೆ ಚುಚ್ಚುತ್ತಿತ್ತು. ಒಂದೊಂದು ಅಕ್ಷರವೂ ಚೇಳಿನಂತೆ ಕುಟುಕತೊಡಗಿತು. ಪತ್ರವನ್ನು ತೆಗೆದು ನೋಡಿದಳು; ಅದೇ ಲಿಪಿ, ಅದೇ ಮಾನಸಿಕ ಶಾತಿಯದ್ಯೋತಕವಾಗಿದ್ದ ಸುಂದರ ಲಿಪಿ; ಪತ್ರದ ಆಶಯವು ಅವಳು ಎಣಿಸಿದುದೇ ಆಗಿತ್ತು. ಇದಕ್ಕಾಗಿ ಅವಳು ಮೊದಲೇ ಸಿದ್ಧತೆ ಮಾಡಿಕೊಂಡಿದ್ದಳು. ದಾನಾನಾಥನು ಇದರಲ್ಲಿ ಕೈಹಾಕುವನೆಂದೇ ಅವಳು ನಿಶ್ಚಯಿಸಿದ್ದಳು. ಈ ಪತ್ರದ ಉತ್ತರವನ್ನು ಮೊದಲೇ ಆಲೋಚಿಸಿದ್ದಳು. ಧನ್ಯವಾದದೊಂದಿಗೆ ತಿರಸ್ಕರಿಸುವುದೇ! ಆದರೆ, ಈ ಪತ್ರವು ಅಮೃತರಾಯನ ಲೇಖನಿಯಿಂದ ಹೊರಟೀತೆಂಬುದು ಅವಳ ಕಲ್ಪನೆಗೂ ಮೀರಿತ್ತು. ಅಮೃತರಾಯನು ಇಂತಹ ಹೃದಯಶೂನ್ಯನೆಂದು ಅವಳು ಅನುಮಾನಿಸಿದ್ದಿಲ್ಲ. ಅಮೃತರಾಯನೊಂದಿಗೆ ವಿಪತ್ತಿನ ಕಠೋರ ಆಘಾತವನ್ನು ಮತ್ತು ವಿಘ್ನಗಳನ್ನು ಸಹಿಸಲು ಸಿದ್ಧವಿದ್ದ ಅವಳ ಹೃದಯವು ಈ ಅವಹೇಳನದ ಗಾಯವನ್ನು ಸಹಿಸಲಿಲ್ಲ. ಅವಳು ವರ್ಷಗಟ್ಟಲೆಯಿಂದ ಹೃದಯದಲ್ಲಿ ಹುದುಗಿಸಿಟ್ಟಿದ್ದ ಆ ಅತುಲಪ್ರೇಮ, ಸೀಮಾತೀತ ಭಕ್ತಿಯು ಅವಳ ಒಂದು ನಿಟ್ಟುಸಿರೊಂದಿಗೆ ಹೊರಟುಹೋಯಿತು. ಅವಳ ಅಂಗಾಂಗಗಳು ಶಿಥಿಲವಾದಂತೆಯೂ, ಹೃದಯವು ನಿಷ್ಪಂದವಾದಂತೆಯೂ ಭಾಸವಾಯಿತು. ಅವಳು "ನೀವು ಏನುಬೇಕಾದರೂ ಮಾಡಿರಿ. ನನಗೆಲ್ಲಾ ಒಪ್ಪಿಗೆಯೇ" ಎನ್ನುತ್ತಾ ತನ್ನ ಕೋಣೆಗೆ ನಡೆದಳು. ಕಿಟಿಕಿಯ ಬಳಿ ನಿಂತು ಬಿಕ್ಕಿ ಬಿಕ್ಕಿ ಅಳಹತ್ತಿದಳು.

ಸಂಜೆಯಾಗುವುದರಲ್ಲಿತ್ತು. ಆಕಾಶದಲ್ಲಿ ಒಂದೊಂದೇ ತಾರೆಗಳು ಮಿನುಗತೊಡಗಿದವು. ಅದೇ ರೀತಿ ಪ್ರೇಮಕುಮಾರಿಯ ಹೃದಯದಲ್ಲಿ ಒಂದೊಂದೇ ಸ್ಮೃತಿಗಳು ಹೊಳೆಯತೊಡಗಿದವು. ನೋಡುತ್ತಿದ್ದಂತೆಯೇ ಇಡೀ ಆಕಾಶವು ಜಗಜಗಿಸುತ್ತಿರುವ ನಕ್ಷತ್ರಗಳಿಂದ ತುಂಬಿಹೋಯಿತು. ಅವಳ ಹೃದಯದಲ್ಲಿ ನೆನಪುಗಳು ಒಂದಿಷ್ಟೂ ಎಡೆಯಿಲ್ಲದಂತೆ ತುಂಬಿಕೊಂಡುವು. ಈ ಅಸಂಖ್ಯಾತ ನಕ್ಷತ್ರಗಳಿಂದ ಆಕಾಶದ ಅಂಧಕಾರವು ಮತ್ತೂ ಗಹನವಾಗಲಿಲ್ಲವೆ?

---

ವೈಶಾಖದಲ್ಲಿ ಪ್ರೇಮಕುಮಾರಿಯ ವಿವಾಹವು ದಾನಾನಾಥನೊಡನೆ ಆಯಿತು. ಬಹಳ ಸಂಭ್ರಮವಿತ್ತು. ಇಡೀ ನಗರದವರಿಗೂ ಆಮಂತ್ರಣ ವಿತ್ತು. ಬದರೀಪ್ರಸಾದನು ಎರಡೂ ಕೈಗಳಿಂದ ಹಣ ವೆಚ್ಚಮಾಡಿದನು. ಆದರೆ ದಾನಾನಾಥನೇನೂ ತಯಾರಿಸಲಿಲ್ಲ. ಅಮೃತ ಚಂದಾ ಕೂಡಿಸು ವುದಕ್ಕೆಂದು ಬಿಹಾರಿನತ್ತ ಹೋಗುವಾಗ ಏನೂ ದುಬಾರಿ ಖರ್ಚು ಮಾಡ ಬೇಡವೆಂದು ಹೇಳಿದ್ದ. ಇವನ ಇಚ್ಛೆಯ ಅವಹೇಳನವನ್ನು ದಾನಾನಾಥನು ಮಾಡುವನೇ?

ಇತ್ತ ಪೂರ್ಣೆಯು ಬಂದ ಮೇಲೆ ಸುಮಿತ್ರೆಗೆ ಕಣ್ಣು ಬಂದಂತಾಯಿತು. ಎಷ್ಟು ಸಮಯ ಇವಳೊಂದಿಗೆ ಮಾತಾಡಿದರೂ ಸುಮಿತ್ರೆಗೆ ಸಾಕೆನಿಸದು. ಅರ್ಧರಾತ್ರಿಯ ವರೆಗೆ ಕುಳಿತು, ತನ್ನ ದುಃಖವನ್ನು ತೋಡಿಕೊಳ್ಳುತ್ತಿದ್ದಳು. ಜೀವನದಲ್ಲಿ ಅವಳ ಜೊತೆಗಾರರೂ ಇದ್ದಿಲ್ಲ. ಪತಿಯ ನಿಷ್ಠುರತೆಯು ನಿತ್ಯ ಅವಳ ಹೃದಯವನ್ನು ಚುಚ್ಚುತ್ತಿತ್ತು. ಈ ನೈಷ್ಠುರ್ಯಕ್ಕೆ ಕಾರಣವೇನೆಂದು ಅವಳಿಗೆ ಇಂದಿನ ವರೆಗೆ ತಿಳಿದಿದ್ದಿಲ್ಲ. ಅವಳಷ್ಟು ಸುಂದರಿಯಲ್ಲವಾದರೂ ಯಾರೂ ಅವಳನ್ನು ಕುರೂಪಿಯೆನ್ನುತ್ತಿರಲಿಲ್ಲ. ಶೃಂಗಾರಪ್ರಿಯೆಯಾಗಿದ್ದಳು. ಪತಿಹೃದಯವನ್ನಪಹರಿಸುವುದಕ್ಕಾಗಿ ಅವಳು ನಿತ್ಯ ನೂತನ ಶೃಂಗಾರವನ್ನು ಮಾಡುತ್ತಿದ್ದಳು. ಆದರೆ ಅಭಿಲಾಷೆಯು ಪೂರ್ತಿಹೊಂದುತ್ತಿರಲಿಲ್ಲವಾದುದ ರಿಂದ ಅವಳ ಮನಸ್ಸು ಉರಿಯುತ್ತಲೇ ಇತ್ತು. ತುಪ್ಪದ ಬಿಂದುವಿನಿಂದ ಹೊತ್ತುವುದು ಅಗ್ನಿಸ್ವಭಾವ. ಆದರೆ ಕೆಲವು ವೇಳೆ ನೀರು ಚಿಮುಕಿಸು ವುದರಿಂದಲೂ ಬೆಂಕಿಯು ಉರಿಯುತ್ತದೆ. ಕಮಲಾಪ್ರಸಾದನು ತನ್ನ ಪ್ರೇಮವನ್ನು ವ್ಯಕ್ತಪಡಿಸುವಾಗ ಅವಳ ಹೃದಯಕ್ಕೆ ಚೂರಿಯಿಂದಿರಿದಂ ತಾಗುತ್ತಿತ್ತು. ಮೂರು ವರ್ಷಗಳ ಹಿಂದೆ ಕಮಲಾನೊಡನೆ ವಿವಾಹವಾದಾಗ ತಾನು ಧನ್ಯೆಯೆಂದೆಣಿಸಿದ್ದಳು. ಎರಡು ಮೂರು ತಿಂಗಳು ಅವಳ ದಿನಗಳು ಸುಖಮಯವಾಗಿ ಕಳೆದುವು. ಆದರೆ ಅವರಿಬ್ಬರ ಪ್ರಕೃತಿಯ ವಿರೋಧವು ತೋರತೊಡಗಿದಾಗ ಒಬ್ಬರಿನ್ನೊಬ್ಬರಿಂದ ದೂರವಾಗತೊಡಗಿದರು. ಸುಮಿ ತ್ರೆಯು ಉದಾರೆ; ಕಮಲಾ ಕೃಪಣ. ಅವನು ಪೈಯನ್ನು ಹಲ್ಲಿನಿಂದ ಕಚ್ಚುವವನು. ಸುಮಿತ್ರೆ ಪ್ರತಿ ಭಿಕ್ಷುಕರಿಗೆ ದಾನಮಾಡುವಾಗಲೂ ಎಲ್ಲರೂ ಕೊಡುವುದಕ್ಕಿಂತ ಹೆಚ್ಚು. ಒಮ್ಮೆ ತನ್ನ ತವರಿಂದ ಶುಭಸಮಾಚಾರ

ವನ್ನು ತಂದ ಬ್ರಾಹ್ಮಣಿಗೆ ತನ್ನ ಹೊಸ ರೇಶ್ಮೆಸೀರೆಯನ್ನೇ ಕೊಟ್ಟಿದ್ದಳು. ಭಿಕ್ಷುಕರ ಮಾತು ಕೇಳುತ್ತಲೇ, ಉರಿದುಬೀಳುತ್ತಾ, ಕಮಲಾನು ಅವರನ್ನು ಹೊಡೆಯು ಹೋಗುತ್ತಿದ್ದನು. ಒಬ್ಬಿಬ್ಬರಿಗೆ ಹೊಡೆದುದೂ ಇದೆ. ಕಮಲಾ ಪ್ರಸಾದನ ಪರಿಚಯವಾದವರು ಆ ಮೇಲೆ ಬರುತ್ತಿದ್ದಿಲ್ಲ. ಸುಮಿತ್ರೆ ಯಲ್ಲಿ ನಮ್ರತೆ, ದಯೆಯಿದ್ದರೆ ಕಮಲಾನಲ್ಲಿ ಹೆಮ್ಮೆ, ಉಚ್ಛೃಂಖಲತೆ, ಮತ್ತು ಸ್ವಾರ್ಥ ತುಂಬಿತ್ತು. ಹೀಗಿರುವಾಗ ಅವರಿಬ್ಬರಿಗೆ ಜೊತೆಗೂಡುವು ದೆಂತು?

ಪೂರ್ಣೆಯು ಬಂದ ಮೇಲೆ ಅವರ ಅಂತರ ಮತ್ತೂ ಹೆಚ್ಚಿತು. ಸುಮಿತ್ರೆಯು ಮನಸ್ಸಿನ ಭಾರ ಇಳಿಯುತ್ತಾ ಬಂತು. ಮೊದಲಾದರೂ ಅವಳು ಚಿಂತಾಭಾರದಿಂದ ಮಂಚದಲ್ಲೇ ಬಿದ್ದಿರುತ್ತಿದ್ದಳು. ಈಗ ಸದಾ ಹಸನ್ಮುಖಿಯಾಗಿರುವಳು. ಕಮಲಾನ ಸುದ್ದಿಯನ್ನೇ ಬಿಟ್ಟಳು. ಅವನು ಯಾವಾಗ ಬರುವನು, ಯಾವಾಗ ಹೋಗುವನು, ಇತ್ಯಾದಿಗಳ ಗೊಡವೆಯೇ ಅವಳಲ್ಲಿಲ್ಲ. ಕಮಲಾನು ಲಂಪಟನಾಗಿದ್ದಿಲ್ಲ. ಯಾವ ಸ್ತ್ರೀಯನ್ನೂ 'ಓಂಗಿ' ಕೊಂಡಿರಲಿಲ್ಲ. ಯಾವ ದುರ್ಗುಣವಿದ್ದರೂ ಇದೊಂದು ಸುಗುಣವೆಂದು ಎಲ್ಲರೂ ತಿಳಿದಿದ್ದರು. ಆದರೆ ಪೂರ್ಣೆಯ ರೂಪ ಅವನನ್ನೆಂತು ಆಕರ್ಷಿ ಸಿತೋ? ಅವಳ ದೀನತೆ, ಸರಳತೆ, ಆಶ್ರಯಹೀನತೆ ಅವನನ್ನು ಸೆಳೆದಿರ ಬೇಕು. ಪೂರ್ಣೆಯ ವಿಷಯದಲ್ಲಿ ಅವನಿಗಾವ ಭಯವೂ ಇದ್ದಿಲ್ಲ. ಅವಳನ್ನು ವಶಪಡಿಸಿಕೊಳ್ಳಲು ಯಾವ ಮಹಾಸಾಧನೆಯೂ ಬೇಡದಷ್ಟು ಸರಳೆಯಾಗಿದ್ದಳು. ಇಲ್ಲಾದರೋ ಯಾರ ಭಯವೂ ಇದ್ದಿಲ್ಲ. ಬರೇ ತನ್ನ ಮನೆಯುವರ ಕಣ್ಣು ತಪ್ಪಿಸಿದರಾಯಿತು. ಇದು ಅಷ್ಟು ಕಠಿನವೂ ಅಲ್ಲ. ಒಂದು ವೇಳೆ ಇಲ್ಲಿ ಅಡ್ಡಿಯಿದೆಯಾದರೆ ಅದು ಸುಮಿತ್ರೆ ಮಾತ್ರ. ಸುಮಿತ್ರೆಯು ಪೂರ್ಣೆಯನ್ನು ಒಂದು ಕ್ಷಣವೂ ಅಗಲುತ್ತಿದ್ದಿಲ್ಲ. ಊಟಕ್ಕೆ ಹೋಗು ವಾಗಲೂ ಇಬ್ಬರೂ ಒಟ್ಟಿಗೆ; ಹಾಸಿಗೆಯ ಮೇಲೂ ಒಟ್ಟಿಗೆ; ಕೋಣೆಯಲ್ಲಿ ನೋಡಿದರೆ ಅಲ್ಲಿಯೂ ಅವರಿಬ್ಬರೂ ಹಗಲಿರುಳೂ ಜೊತೆಯಾಗಿಯೇ. ಕಮಲಾನು ಶಯನಾಗಾರವನ್ನು ಪ್ರವೇಶಿಸಿ, ಸುಮಿತ್ರೆಯ ದಾರಿ ನೋಡುತ್ತಾ ನಿದ್ದೆ ಮಾಡುತ್ತಿದ್ದನು. ಅವಳು ಎಷ್ಟು ಹೊತ್ತಿಗೆ ಬಂದು ಮಲಗಿದಳೆಂದು ಯಾರಿಗೆ ಗೊತ್ತು? ಪೂರ್ಣೆಯೊಡನೆ ಏಕಾಂತದಲ್ಲಾಡುವುದಕ್ಕೆ ಅವನಿಗೆ ಸಂದರ್ಭವೇ ಸಿಗುತ್ತಿದ್ದಿಲ್ಲ. ಮನಸ್ಸಿನಲ್ಲೇ ಸುಮಿತ್ರೆಯ ಮೇಲೆ ಕುಪಿತನಾಗು ತ್ತಿದ್ದನು. ಒಂದು ದಿನ ಅವನಿಂದ ತಡೆಯಲಾಗಲಿಲ್ಲ. ಸುಮಿತ್ರೆಯೊಡನೆ "ನೀನು ಹಗಲಿರುಳೂ ಪೂರ್ಣೆಯೊಂದಿಗೇಕಿರುವೆ? ಅವಳು ಮನಸ್ಸಿನಲ್ಲಿ

ನಿನ್ನನ್ನೊಂದು ಪೀಡೆಯೆಂದು ತಿಳಿಯಳೇ? ನಿನ್ನ ಮಾತು ಕೇಳುವಾಗ ಅವಳಿಗೆ ಆನಂದವಾಗಲಾರದು. ನಿನ್ನ ಮೂರ್ಖತೆಗೆ ಅವಳು ನಕ್ಕಾಳು" ಎಂದನು.

ಅದಕ್ಕೆ ಸುಮಿತ್ರೆಯು, "ಒಬ್ಬಳಾಗಿರಬೇಕೆ? ಅಷ್ಟು ಮಾತ್ರವಲ್ಲ; ನಾನು ವಿರಾಮವಾಗಿ ನಿದ್ರಿಸುವುದು, ಅವಳು ಒಬ್ಬಳೇ ಇರುವುದು, ಇದು ಸರಿಯೇ? ನಾನು ಅವಳನ್ನಗಲಿ ಎದ್ದರೆ, ನನ್ನನ್ನು ಹಿಡಿದೆಳೆಯುವಳು; ಬಿಡುವುದೇ ಇಲ್ಲ. ನನ್ನ ಮೂರ್ಖತೆಗೆ ನಗುವಳೇ? ಯಾರಿಗೆ ಗೊತ್ತು? ಆದರೆ ನನ್ನಲ್ಲಿ ಅವಳೇನೂ ಬೇಸರಿಸುವುದಿಲ್ಲ" ಎಂದಳು.

"ಅವಳ ಸ್ಥಿತಿಯನ್ನು ನೀನು ಯೋಚಿಸಬೇಡವೆ? ನೀನು ಅವಳೊಂದಿ ಗಿರುವುದಕ್ಕೆ ಅವಳಿಗೆಷ್ಟು ಯೋಗ್ಯತೆಯಿದೆ?"

"ಇಂತಹ ಮೇಲು ಕೀಳನ್ನು ನಾನು ಯೋಚಿಸುವುದಿಲ್ಲ."

"ಇನಾದರೂ ಯೋಚಿಸಿ ನೋಡು."

"ಹೀಗೆ ಯೋಚಿಸುವುದೇ ಯೋಗ್ಯವಲ್ಲ."

ಅಂದಿನಿಂದ ಸುಮಿತ್ರೆಯು ನೆರಳಿನಂತೆ ಸದಾ ಅವಳೊಂದಿಗಿರ ತೊಡಗಿದಳು.

ಕಮಲಾಪ್ರಸಾದನ ಚರಿತ್ರೆಯಲ್ಲಿ ಈಗೊಂದು ವಿಚಿತ್ರ ಬದಲಾವಣೆ ಯಾಗತೊಡಗಿತು. ಸಿನೆಮಾ ನೋಡುವ ಹುಚ್ಚು ಕಡಮೆಯಾಯಿತು. ಆಳುಗಳ ಮೇಲಿನ ಅಧಿಕಾರವೂ ಕಡಮೆಯಾಯಿತು. ಕಿಂಚಿದೌದಾರ್ಯವು ತಲೆದೋರಿತು. ಒಂದು ದಿನ ಬರುತ್ತಾ ಬಂಗಾಲಿ ಮಿಠಾಯಿಯನ್ನು ತಂದು ಸುಮಿತ್ರೆಯ ಕೈಯಲ್ಲಿಟ್ಟನು. ಜೊತೆಗೆ "ನಿನ್ನ ಗೆಳತಿಗೂ ಸ್ವಲ್ಪ ತಿನ್ನಿಸು" ಎನ್ನದಿರಲಿಲ್ಲ. ಅವಳು ಹಾಗೆಯೇ ಮಾಡಿದಳು. ಆದರೆ ಪೂರ್ಣೆ ಅದರ ವಿಚಾರದಲ್ಲಿ ಏನೂ ಹೇಳಲಿಲ್ಲ. ಮರುದಿನ ಕಮಲಾಪ್ರಸಾದನು "ಪೂರ್ಣೆಗೆ ಮಿಠಾಯಿ ರುಚಿಸಿರಬಹುದು" ಎಂದನು. ಸುಮಿತ್ರೆಯು "ಅವಳಿಗೆ ಮಿಠಾಯಿಯಲ್ಲಿ ಪ್ರೀತಿಯೇ ಇಲ್ಲವಂತೆ" ಎಂದಳು.

ಕೆಲವು ದಿನ ಕಳೆಯಿತು. ಕಮಲಾಪ್ರಸಾದನು ಎರಡು ರೇಶ್ಮೆಸೀರೆ ಗಳನ್ನು ತಂದನು. ತನ್ನ ಕೋಣೆಗೆ ಹೋಗಿ ನೋಡುತ್ತಾನೆ, ಸಖಿಯರಿಬ್ಬರೂ ಒಂದೇ ಮಂಚದಲ್ಲಿ ಮಲಗಿಕೊಂಡು ಮಾತಾಡುತ್ತಿದ್ದರು. ಗಾಬರಿಯಿಂ ದಿಬ್ಬರೂ ಎದ್ದರು. ಪೂರ್ಣೆಯು ಈಗ ಗೋಷೆಯೊಳಗಿದ್ದಿಲ್ಲ. ಅವಳ ಮೈಯೆಲ್ಲಾ ನಾಚಿಕೆಯಿಂದ ಬೆವರಿ ಒದ್ದೆಯಾಯಿತು, ಸುಮಿತ್ರೆಯು ಪತಿ ಯನ್ನು ಕುಪಿತನೇತ್ರಗಳಿಂದ ನೋಡಿದಳು.

ಕಮಲಾಪ್ರಸಾದನಿಗೆ ಒಮ್ಮೆಗೆ ಏನು ಮಾತಾಡಲೆಂದು ತಿಳಿಯಲಿಲ್ಲ. "ಪೂರ್ಣೆ ಇಲ್ಲೇ ಇರುವಳೆ! ನನಗೆ ಗೊತ್ತಿದ್ದಿಲ್ಲ; ಬಂದೆ. ಇಲ್ಲಿ ನೋಡು, ಸುಮಿತ್ರಾ, ಎರಡು ಸೀರೆಗಳನ್ನು ತಂದಿರುವೆನು. ಕಡಿಮೆ ಬೆಲೆಗೆ ದೊರೆಯಿತು. ಒಂದು ನಿನಗಾಯಿತು; ಇನ್ನೊಂದು ಪೂರ್ಣೆಗೆ." ಎಂದನು.

ಸುಮಿತ್ರೆ ಸೀರೆಯನ್ನು ನೋಡದೆ, ಅಥವಾ ನೋಡುವ ಆಗ್ರಹವಿಲ್ಲದೆ ಉತ್ತರ ಕೊಟ್ಟಳು; "ಸೀರೆಯ ಆವಶ್ಯಕತೆಯಿರಲಿಲ್ಲವೀಗ. ನನಗೆ ಸೀರೆಗಳ ಕೊರತೆಯೇನಿಲ್ಲ. ಒಂದು ವೇಳೆ ಪೂರ್ಣೆಗೆ ರೇಶ್ಮೆಯ ಸೀರೆ ಬೇಕೆಂದಿದ್ದರೆ ನನ್ನ ಹೊಸ ಸೀರೆಯನ್ನೇ ಕೊಡುತ್ತಿದ್ದೆ .... "ಪೂರ್ಣಾ, ಇದರಿಂದೊಂದು ನಿನಗೆ ಬೇಕೆ?"

"ಬೇಡ. ನನಗೇಕೆ ಪಟ್ಟೆಸೀರೆ?" ಎಂದು ತಲೆ ತಗ್ಗಿಸಿಯೇ ಉತ್ತರ ವಿತ್ತಳು ಪೂರ್ಣಾ.

ಕಮಲಾಪ್ರಸಾದ– ಅದೇಕೆ? ಪಟ್ಟೆಯೇನು ಅಸ್ಪೃಶ್ಯವೇ?

ಸುಮಿತ್ರೆ– ಅಲ್ಲ; ಆದರೆ ಥಳಕಿನ ವಸ್ತುವಷ್ಟೆ. ಎಲ್ಲಕ್ಕೂ ಮೊದಲು ನಿಮ್ಮ ಪೂಜ್ಯ ತಾಯಿಯವರಿಗೆ ಹೊಟ್ಟೆನೋವಾದೀತು.

ಕಮಲಾಪ್ರಸಾದ– ಹೇಗಿದ್ದರೂ ಇನ್ನದನ್ನು ಹಿಂದಕ್ಕೊಪ್ಪಿಸಲಾಗು ವುದಿಲ್ಲ. ಕ್ರಯ ಕೊಡಲಂಜಿದಿರೆಂದು ಅಂಗಡಿಯವನೆಂದಾನು.

ಸುಮಿತ್ರೆ– ಹಾಗಿದ್ದರೆ ಪ್ರೇಮಕುಮಾರಿಗೆ ಕಳುಹಿಸಿರಿ. ನೀವು ತೆಗೆದ ಸೀರೆಯನ್ನು ನೋಡಿ ಆನಂದಪಟ್ಟಾಳು. ಎಲ್ಲಿಯೋ ನಿನ್ನೆ ಧರ್ಮಕ್ಕೆ ಬಹಳ ಹಣ ದೊರಕಿತೆಂದು ತೋರುವುದು. ಇಲ್ಲವಾದರೆ ತಮ್ಮ ಸ್ವಂತ ಹಣ ವೆಚ್ಚಮಾಡಿ ಇಂತಹ ಸೀರೆಯನ್ನೆಂದಿಗೂ ತರುತ್ತಿದ್ದಿಲ್ಲ.

ಕಮಲಾಪ್ರಸಾದನು ಆಗ್ನೇಯ ದೃಷ್ಟಿಯಿಂದ ಸುಮಿತ್ರೆಯನ್ನು ನೋಡ ತೊಡಗಿದನು. "ನಿನ್ನಪ್ಪನ ಗಂಟನ್ನು ನುಂಗಿದೆ!" ಎಂದು ಮಾತು ಚಿಮ್ಮಿತು.

"ಕೇಳಿದರೆ ಕೊಡುತ್ತಿದ್ದಿಲ್ಲವೇ? ನೀವೇಕೆ ನುಂಗುವುದು?" ಎಂದು ಕೂಡಲೇ ಸುಮಿತ್ರೆಯ ಉತ್ತರವೂ ಬಂದಿತು.

ಕಮಲಾನು ಪೂರ್ಣೆಯೊಡನೆ ಈ ವ್ಯಾಜ್ಯವನ್ನೊಪ್ಪಿಸತೊಡಗಿದನು; "ಕೇಳಿದೆಯಾ, ಪೂರ್ಣಾ! ಇವಳ ಮಾತನ್ನು? ಪತಿಯೊಡನೆ ಮಾತಾಡುವ ರೀತಿ ಇದೇಯೇನು? ನೀನು ಇವಳಿಗೆ ಹೇಳುವುದಿಲ್ಲವೇಕೆ? ನೀನು ಬಂದ ಮೇಲೆ ಇವಳು ಮತ್ತೂ ಏರಿರುವಳು."

ಪೂರ್ಣೆಗೆ ಸುಮಿತ್ರೆಯ ಕಠೋರತೆಯು ಸರಿಯೆನಿಸಲಿಲ್ಲ. ಏಕಾಂತ ದಲ್ಲಿ ಪ್ರಸಾದನೇ ಸುಮಿತ್ರೆಯನ್ನು ಕಾಡುತ್ತಿದ್ದರೂ, ಈಗ ಸುಮಿತ್ರೆಯೇ

ಕಾಡುವುದಾಗಿತ್ತು. ಅವಳಿಗೊಂದು ಭಯವುಂಟಾಯಿತು. ಎಲ್ಲಾದರೂ ಈತನಿಗೆ ಸಿಟ್ಟಾದರೆ, ತಾನೀ ಮನೆಯಿಂದ ಹೊರಡಬೇಕಾದೀತು! ಇವನಿಗೆ ಅಪ್ರಸನ್ನತೆಯಾದರೆ ಈ ಭವನದಲ್ಲಿ ಒಂದು ಕ್ಷಣವೂ ನಿರ್ವಾಹವಾಗದೆಂದು ಅವಳಿಗೆ ಗೊತ್ತು. ಇದಕ್ಕಾಗಿಯೇ ಅವಳು ಸುಮಿತ್ರೆಯನ್ನು ಸಮಾಧಾನಿಸುತ್ತಿದ್ದಳು. ಕಮಲಾನೊಡನೆ, "ಅವಳಿಗೆ ಹೇಳದೆ ಏನೂ ಬಾಕಿಯಿಲ್ಲ. ಬೇಕಾದರೆ ಕೇಳಿ ನೋಡಿರಿ." ಎಂದಳು.

ಸುಮಿತ್ರೆಯು ತೀವ್ರಸ್ವರದಿಂದ "ಇವಳು ಬಂದ ಮೇಲೆ ಮತ್ತೂ ಏರಿರುವುದೆಂತು? ಅದನ್ನು ಮೊದಲು ಹೇಳಿರಿ. ಇವಳು ನನ್ನನ್ನು ಸಿಂಹಾಸನದ ಮೇಲೇರಿಸಲಿಲ್ಲ. ಮೊದಲು ಒಬ್ಬಳೇ ಇರುತ್ತಿದ್ದೆ. ಈಗ ಜೊತೆಗೆ ಇವಳಿರುವಳು. ನಿಮಗಿದನ್ನು ನೋಡಲಾಗುವುದಿಲ್ಲವೆ?" ಎಂದಳು.

ಕಮಲಾಪ್ರಸಾದ– ನೀನು ಸುಮ್ಮನೆ ಮಾತು ಬೆಳೆಯಿಸುತ್ತಿ, ಸುಮಿತ್ರಾ. ನೀನು ಇವಳ ಸಂಗವನ್ನು ಬಿಡೆಂದು ನಾನು ಎಂದಾದರೂ ಎಂದುದುಂಟೆ?

ಸುಮಿತ್ರೆ– ಹಾಗಾದರೆ ಇವಳು ಬಂದ ಮೇಲೆ ನಾನು ಏರಿದೆನೆನ್ನುವುದರ ಆಶಯವೇನು?

ಕಮಲಾಪ್ರಸಾದ– ನಾನು ಹೇಳುವುದು ಸುಳ್ಳೆ? ನೀನು ಇವಳ ಸಂಗದಿಂದ ಸುಬುದ್ಧಿಯನ್ನು ಕಲಿಯಬೇಕಿತ್ತು. ಇವಳನ್ನು ನಾನು ಇಲ್ಲಿಗೆ ಕರೆತಂದ ಉದ್ದೇಶವೇ ಅದು. ಆದರೆ, ಇವಳ ಒಡನಾಟದಿಂದ ನಿನ್ನ ರೀತಿಯೇ ಬೇರೆಯಾಯಿತು. ಇವಳು ನಿನಗೆ ತಿಳಿಯಹೇಳಿದರೂ ನೀನು ಕೇಳಬೇಕಲ್ಲ? ನೀನು ನನ್ನನ್ನೇ ಗಣ್ಯಕ್ಕೆ ತಾರದಿರುವಾಗ ಇವಳನ್ನೇಕೆ ಗಣ್ಯಕ್ಕೆ ತರುವೆ? ಭಗವಂತನು ನನಗೆ ಎಲ್ಲಾ ದುಃಖವನ್ನೂ ಕೊಡಲಿ. ಆದರೆ ಕೆಟ್ಟವರ ಸಂಗವನ್ನು ಮಾತ್ರ ಕೊಡದಿರಲಿ...... ನೀನು ಇದರಿಂದೊಂದನ್ನಿಟ್ಟುಕೊ, ಪೂರ್ಣಾ. ಮತ್ತೊಂದನ್ನು ತಂಗಿಗೆ ಕಳುಹಿಸುವೆನು.

ಸುಮಿತ್ರೆಯು ಎರಡೂ ಸೀರೆಗಳನ್ನು ಬಾಗಿಲಿಂದ ಹೊರಗೆಸೆದಳು. ಎರಡು ಮಡಿಕೆಯಾಗಿ ಕಟ್ಟಿದ್ದ ಸೀರೆಗಳು ಜಗಲಿಯಲ್ಲಿ ಬಿದ್ದುವು. ಆಳು ಅದೇ ಸಮಯದಲ್ಲಿ ಜಗಲಿಯನ್ನು ತೊಳೆಯುತ್ತಿದ್ದ. ಅವನು ಓಡಿಹೋಗಿ ಸೀರೆಯನ್ನೆತ್ತಿಕೊಳ್ಳುವಷ್ಟರಲ್ಲಿ ಅವುಗಳಿಗೆ ಕೆಸರಾಯಿತು. ಪೂರ್ಣೆಯು ತಿರಸ್ಕಾರಭಾವದಿಂದ "ಇದೇನು ಮಾಡಿದೆ ಸೋದರೀ? ಸೀರೆಗಳಿಗೆ ಕೆಸರಾಯಿತಲ್ಲಾ?" ಎಂದಳು.

ಕಮಲಾಪ್ರಸಾದ– ಇವಳ ಕೆಲಸಗಳನ್ನು ನೋಡು. ಮತ್ತೂ ನಾನೇ ದೋಷಿ ಅಲ್ಲವೆ?

ಸುಮಿತ್ರೆ– ನಿಮ್ಮ ಸೀರೆಗಳನ್ನು ತೆಗೆದುಕೊಂಡು ಹೋಗುವುದಿಲ್ಲವೇಕೆ?

ಕಮಲಾಪ್ರಸಾದ– ನಿನಗೆ ನಾನು ಕೊಡುವುದೇ ಇಲ್ಲ.

ಸುಮಿತ್ರೆ– ಪೂರ್ಣೆಯೂ ತೆಗೆದುಕೊಳ್ಳಲಾರಳು.

ಕಮಲಾಪ್ರಸಾದ– ಅವಳ ಪಕ್ಷವಹಿಸಿ ಮಾತಾಡುವುದಕ್ಕೆ ನೀನಾರು? ಹೇಳು ಪೂರ್ಣಾ, ಒಂದನ್ನು ತೆಗೆದುಕೊಳ್ಳುವೆಯಲ್ಲ? ನೀನು ತಿರಸ್ಕಾರ ಮಾಡಿದರೆ ನನಗೆ ಬಹಳ ಖೇದವಾದೀತೆಂದು ಯೋಚಿಸಿರುವೆಯಷ್ಟೆ?

ಪೂರ್ಣೆಯು ಅಡಕೊತ್ತಿನಲ್ಲಿ ಬಿದ್ದ ಅಡಿಕೆಯಂತಾದಳು. ಸೀರೆಯನ್ನು ತೆಗೆದುಕೊಂಡರೆ ಸುಮಿತ್ರೆಗಾಗುವುದಿಲ್ಲ, ತೆಗೆದುಕೊಳ್ಳದಿದ್ದರೆ ಪ್ರಸಾದನಿಗಾಗುವುದಿಲ್ಲ. ಇವನು ಇಷ್ಟೇಕೆ ಒತ್ತಾಯ ಮಾಡುವನೆಂದು ಅವಳಿಗೆ ತಿಳಿಯದಾಯಿತು. ಎರಡೂ ಕೊನೆಗಳಲ್ಲಿ ನಿಂತು, ತೂಗಿಕೊಂಡು ಸುಮಿತ್ರೆಯ ಪಕ್ಷವಹಿಸುವುದೆಂದು ನಿರ್ಧರಿಸಿದಳು. ಒಂದು ವೇಳೆ ತನಗೆ ಇಲ್ಲಿಂದ ಹೊರಡಬೇಕಾಗಬಹುದು. ಸುಮಿತ್ರೆಗೆ ಬೇಸರವಾದರೆ ಅವಳ ಮನಸ್ಸು ಎಂತಹ ಕುತ್ಸಿತಭಾವನೆಗಳಿಗೆಡೆಗೊಡುವುದೋ ಯಾರಿಗೆ ಗೊತ್ತು? “ಅಯ್ಯಾ, ನಾನು ರೇಶ್ಮೆಸೀರೆಯನ್ನುಡಬಾರದು” ಎಂದು ಕಮಲಾಪ್ರಸಾದನ ಕಡೆ ನೋಡಿದಳು. ಅದರಲ್ಲೆಷ್ಟು ದೀನತೆಯಿತ್ತು! ಕ್ಷಮಾಪ್ರಾರ್ಥನೆಯಿಂದ ತುಂಬಿಕೊಂಡಿತ್ತು! ತೆಗೆದುಕೊಳ್ಳಲು ಇಚ್ಛಿಸುತ್ತೇನೆ. ಆದರೆ, ತೆಗೆದುಕೊಳ್ಳುವುದೆಂತು? ಇವಳನ್ನು ತಾವು ನೋಡುತ್ತಿರುವಿರಷ್ಟೆ! ಎಂಬ ಭಾವವು ತುಂಬಿಕೊಂಡಿತ್ತು. ಕಮಲಾಪ್ರಸಾದನು ಏನೂ ಹೇಳಲಿಲ್ಲ; ಸುಮ್ಮಗೆ ಸೀರೆಗಳನ್ನು ತೆಗೆದುಕೊಂಡು ಕಾಲನ್ನಪ್ಪಳಿಸುತ್ತಾ ಹೊರಗೆ ನಡೆದನು.

---



೬

ಸೀರೆಗಳನ್ನು ಹಿಂದಿರುಗಿಸಿ, ಕಮಲಾಪ್ರಸಾದನನ್ನು ಅಪ್ರಸನ್ನನಾಗಿ ಮಾಡಿದುದು ಪೂರ್ಣೆಗೆ ತೃಪ್ತಿಯೆನಿಸಲಿಲ್ಲ. ಸುಮಿತ್ರೆಯ ಮನಸ್ಸಿನಲ್ಲಿ ಆರೂಢವಾಗಿದ್ದ ಆ ಸಂಶಯವನ್ನವಳಿಂದ ದೂರ ಮಾಡಲಾಗಲಿಲ್ಲ. ಅವಳಿಗೆ ಎರಡೂ ಕಡೆಗಳಿಂದ ಪೆಟ್ಟು ಬಿತ್ತು. ಕಮಲಾಪ್ರಸಾದನು ಸಿಟ್ಟುಗೊಂಡಿದ್ದ; ಸುಮಿತ್ರೆಯೂ ಸಂಶಯ ತಾಳಿದ್ದಳು. ಪೂರ್ಣೆಯು ಅವಳ ಮನಸ್ಸನ್ನು ರಮಿಸುವುದಕ್ಕಾಗಿ ಎಷ್ಟೋ ಪ್ರಯತ್ನಪಟ್ಟಳು. ಆದರೆ ಅವಳು ತಿರಸ್ಕಾರದಿಂದ “ಈಗ ನನ್ನೊಡನೇನೂ ಮಾತಾಡಬೇಡ, ಪೂರ್ಣಾ. ನನಗಾವುದೂ

ತಿಳಿಯುವುದಿಲ್ಲ. ನಾನು ಹುಟ್ಟಿದ್ದೇ ಅಭಾಗಿನಿಯಾಗಿ. ಇಲ್ಲವಾದರೆ ಈ ಮನೆಗೇಕೆ ಬರುತ್ತಿದ್ದೆ? ನಿನ್ನ ದೋಷವಿದೆಯೆಂದು ತಿಳಿಯಬೇಡ. ಇದೆಲ್ಲ ನನ್ನ ಭಾಗ್ಯದ ಫಲ. ಈಗ ನೀನು ಇಲ್ಲಿಂದ ದಯಮಾಡಿ ತೆರಳಿ, ನನ್ನನ್ನು ಏಕಾಂತದಲ್ಲಿ ಮನಸ್ವೀ ಅಳುವುದಕ್ಕೆ ಬಿಡು. ಅಂದರೆ ನನಗೆ ಕೊಂಚ ಸುಖವಾದೀತು" ಎಂದಳು.

ಪೂರ್ಣೆಗೆ ಅಲ್ಲಿ ನಿಲ್ಲುವುದಕ್ಕಾಗದೆ, ಅವಳು ಮೆಲ್ಲನೆ ತನ್ನ ಕೋಣೆಗೆ ಹೋದಳು. ಸುಮಿತ್ರೆಯು ಅಳುತ್ತಿದ್ದಳೋ, ಇಲ್ಲವೋ? ಆದರೆ ಪೂರ್ಣೆ ಬೇಕಾದಷ್ಟು ಅತ್ತುಕೊಂಡಳು. ಇಷ್ಟರ ವರೆಗೆ ಸುಮಿತ್ರೆಯನ್ನು ಪ್ರಸನ್ನಳಾಗಿ ಮಾಡುವುದರಿಂದಾಗಿ, ತನ್ನ ದುರ್ಘಟನೆಯ ಕುರಿತು ಚಿಂತಿಸುವುದಕ್ಕೆ ಅವಳಿಗೆ ಅವಕಾಶವಿದ್ದಿಲ್ಲ. ಈಗ ಕಣ್ಣೀರು ಸುರಿಸುತ್ತಾ ತನ್ನ ವಿಷಯ ಆಲೋಚಿಸತೊಡಗಿದಳು. ಕಮಲಾಪ್ರಸಾದನು ವಾಸ್ತವವಾಗಿ ಸೀರೆಯನ್ನು ಅವಳಿಗಾಗಿಯೇ ತಂದಿದ್ದನೇ? ಯಾಕಾಗಿ ತಂದನು? ಒಂದು ದಿನ ಹೊರತು ಮತ್ತೆಂದೂ ಅವನೊಡನೆ ಮಾತಾಡಿರಲಿಲ್ಲ. ಅಂದಾದರೂ ಅವಳೇ ಸ್ವತಃ ಮಾತಾಡಿದ್ದಲ್ಲ. ಕಮಲಾಪ್ರಸಾದನ ಮಾತುಗಳನ್ನೇ ಕೇಳುತ್ತಿದ್ದಳು. ಒಂದು ವೇಳೆ ಅವಳದೂ ತಪ್ಪಿರುವುದಾದರೆ, ಅದು ಇಲ್ಲಿಗೆ ಬರಲೊಪ್ಪಿದುದೇ? ಒಪ್ಪದೆ ಮಾಡುವುದೇನು? ಬೇರಾವ ಉಪಾಯವಿದೆ? ತಾನು ಎನ್ನುವವರಾರೂ ಇಲ್ಲ. ಇವರೇ ಕೊಟ್ಟುದನ್ನು ತಿನ್ನುತ್ತಿರುವಾಗ, ಇಲ್ಲಿ ಬಂದುದು ತಪ್ಪೇನು? ಇಲ್ಲಿಗೆ ಬಂದ ಮೇಲೂ ಅವಳೆಂದೂ ಅವನ ಕೂಡೆ ಮಾತಾಡಿದ್ದಿಲ್ಲ. ಹೀಗಿದ್ದರೆ ಅವನಾಗಿ ರೇಶ್ಮೆಸೀರೆಯನ್ನೇಕೆ ತಂದುದು? ಅವನು ನಿಜವಾದ ಕೃಪಣನಿರುವಾಗ, ಈ ಉದಾರತೆಗೆ ಕಾರಣವೇನು? ಸುಮಿತ್ರೆಯು ಸೀರೆಯನ್ನು ಇಚ್ಛಿಸಿದ್ದಿಲ್ಲ. ಒಂದು ವೇಳೆ ಅವಳಿಗೆ ತರುವುದಿದ್ದರೆ, ನನಗೂ ತರುವ ಅಗತ್ಯವಿದೆಯೆ? ನಾನು ನಾದಿನಿಯೂ ಅಲ್ಲ; ಅತ್ತಿಗೆಯೂ ಅಲ್ಲ. ಕೇವಲ ಆಶ್ರಿತಳು......

ಆಲೋಚಿಸುತ್ತಾ, ಆಲೋಚಿಸುತ್ತಾ, ಅವಳು ಎಣಿಸದ, ಎಣಿಸಲು ಸಂಭವವೂ ಇಲ್ಲದ, ಒಂದು ಮಾತು ಹೊಳೆಯಿತು. ಆ ಕೂಡಲೇ ಅವಳೆದುರು ಭಯಂಕರ ಪ್ರಾಣಿಯೊಂದು ಬಂದಷ್ಟು ಭಯವಾಯಿತು. ಅವಳ ಅಂತಃಕರಣ, ಚೇತನ, ಆತ್ಮಗಳು ಅಂಧಕಾರಮಯ ಶೂನ್ಯದಲ್ಲಿ ಲೀನವಾದಂತೆ ಭಾಸವಾಯಿತು. – ಕಮಲಾಪ್ರಸಾದನು ಅವಳಿಗಾಗಿ ಸೀರೆಯನ್ನು ತಂದುದಲ್ಲ. ಸುಮಿತ್ರೆಗಾಗಿಯೂ ತಂದುದಲ್ಲ. ತನ್ನ ಈ ರೀತಿಯ ನಡತೆಯ ಸುಳಿವು ಸುಮಿತ್ರೆಗೆ ಹತ್ತಬಾರದೆಂದು ಅವಳಿಗೆ ಸೀರೆಯನ್ನು ತಂದುದಾಗಿತ್ತು.

ಇದೇ ನಿಶ್ಚಯವೆಂದಾದರೆ, ಮಹಾಅನರ್ಥ! ಇದು ನಿಜವೆಂದಾದರೆ ಇನ್ನು ಒಂದು ಕ್ಷಣವಾದರೂ ಈ ಮನೆಯಲ್ಲಿ ನಿಲ್ಲಬಹುದೇ? ಅವಳು ಕೂಲಿಯಾದಾಳು, ಭಿಕ್ಷೆಬೇಡಿಯಾಳು; ಆದರೆ ಇಲ್ಲಿರಲಾರಳು. ಈ ಸಂದೇಹವೇ ಸುಮಿತ್ರೆಗೆ ತನ್ನನ್ನು ಸಖಿಯನ್ನಾಗಿಸಿತೇ? ಅವಳಿಗೆ ಆರಂಭದ ದಿನವೇ ಈ ಅನುಮಾನವುಂಟಾಗಿತ್ತೇ? ಹಾಗಿದ್ದರೆ ಅವಳೇಕೆ ತನ್ನಲ್ಲಿ ಹೇಳಲಿಲ್ಲ? ಸುಮಿತ್ರೆಯು ತನ್ನಾಗಮನವನ್ನು ಕುತ್ಸಿತವಾಗಿ ತಿಳಿದಿರುವಳೇನು? ಅವಳೆಣಿಕೆಯಂತೆ ತಾನು ಬಂದುದೂ, ತನ್ನನ್ನು ಕಂಡುದೂ ಪ್ರೇಮಕ್ರೀಡೆಗಾಗಿಯೇನು? . . . . ಇನ್ನು ಮುಂದೆ ಪೂರ್ಣೆಗೆ ಮನಸ್ಸೋಡಲಿಲ್ಲ. ನೀಳವಾದ ಉಸಿರು ಬಿಡುತ್ತಾ ಮಂಚದ ಮೇಲೆ ಬಿದ್ದಳು. ಯಮರಾಜನಿಗೆ ಆಮಂತ್ರಣವನ್ನೀಯುವಳೋ ಎಂದು ತೋರುತ್ತಿತ್ತು. ಹೇ ಭಗವನ್ ವೈಧವ್ಯವೆಂದರೆ ಕಲಂಕದ ಇನ್ನೊಂದು ಹೆಸರೇ?

ಈ ಮನೆಯನ್ನು ತ್ಯಜಿಸುವ ಸಂಕಲ್ಪ ಮಾಡಿದರೂ, ಅವಳಿಗೆ ಇದನ್ನು ಬಿಡಲಾಗಲಿಲ್ಲ. ಹೋಗುವುದಾದರೂ ಎಲ್ಲಿಗೆ? ಇಷ್ಟು ಬೇಗ ಹೋದರೆ ಈ ಲಾಂಛನವನ್ನು ಮತ್ತಷ್ಟು ದೃಢಪಡಿಸಿದಂತಾಗುವುದಿಲ್ಲವೆ? ವಿಧವೆಯ ಮೇಲೆ ದೋಷಾರೋಪಣೆ ಮಾಡುವುದೇನೂ ಕಠಿನವಲ್ಲ. ಅವರನ್ನು ಜನರು ನೀಚರಿಗಿಂತಲೂ ಅಧಮರೆಂದು ತಿಳಿಯುವುದು ಬಹು ಬೇಗನೇ! ಜನರ ದೃಷ್ಟಿಯಲ್ಲಿ ವಿಧವೆಯೆಂದರೆ, ಮನಸ್ಸಿನ ದುರ್ವಾಸನೆ ದುರ್ಬಲತೆಗಳ ನಿರ್ಝರ!

ಊಟಕ್ಕೆ ಹೋಗುವಾಗ ಸುಮಿತ್ರೆಯು ಪೂರ್ಣೆಯನ್ನು ಜೊತೆಯಲ್ಲೇ ಕರೆದುಕೊಳ್ಳುತ್ತಿದ್ದಳು. ಇಂದೂ ಅವಳು ಕೋಣೆಯ ಬಾಗಿಲಲ್ಲಿ ನಿಂತು ಕರೆದಳು. ಪೂರ್ಣೆಯು ನಮ್ರತೆಯಿಂದ, "ಇಂದು ನನಗೇನೂ ಹಸಿವಿಲ್ಲ" ಎಂದಳು. ಸುಮಿತ್ರೆಯು ಒತ್ತಾಯಿಸಲಿಲ್ಲ.

ಎರಡು ದಿನಗಳು ಕಳೆದುವು. ಪೂರ್ಣೆಯಿನ್ನೂ ಮೊದಲಿನಂತೆಯೇ ಯೋಚಿಸುತ್ತಾ ಕುಳಿತಿದ್ದಳು. ಅವಳು ಕಮಲಾಪ್ರಸಾದನೊಡನೆ ಒಮ್ಮೆ ಮಾತಾಡಬೇಕೆಂದು ಬಹು ಹೊತ್ತಿನಿಂದ ಗ್ರಹಿಸಿದ್ದಳು. ಆದರೆ ಇನ್ನೂ ಸಂದರ್ಭ ಒದಗಿದ್ದಿಲ್ಲ. ಈ ಎರಡು ದಿನ ಊಟ ಮಾಡಿದ್ದೂ ಇಲ್ಲ; ಸುಮಿತ್ರೆ ಅವಳನ್ನು ಮಾತಾಡಿಸಿದ್ದೂ ಇಲ್ಲ; ನೋಡಿದ್ದೂ ಇಲ್ಲ! ಹೇಗಾದರೂ ಸಂಜೆ ಪೂರ್ಣೆಯೇ ಸುಮಿತ್ರೆಯ ಬಳಿ ಹೋದಳು. ಆಗ ಸುಮಿತ್ರೆಯೇ ಮಾತಾಡಿಸಿದಳು. "ತಂಗೀ, ಇಂದು ನನ್ನನ್ನಿಲ್ಲಿಂದ ಕರೆಸಿರೆಂದು ತವರಿಗೆ ಬರೆದಿರುವೆನು. ಇಲ್ಲಿರುವಾಗ ಜೀವವು ಅನಿರ್ವಚನೀಯ ವೇದನೆಯಿಂದ ಸವೆಯುತ್ತಿದೆ."

"ನಾನೂ ಹೋಗುವೆನು. ಇಲ್ಲಿ ಒಬ್ಬಳೇ ಹೇಗಿರಲಿ?" ಎಂದಳು ಪೂರ್ಣಾ.

ಸುಮಿತ್ರೆ– ಇದು ತಮಾಷೆಯಲ್ಲ, ಪೂರ್ಣಾ. ಈ ಎರಡು ದಿನಗಳಲ್ಲಿ ನಾನವರ ಮುಖವನ್ನಾದರೂ ಕಂಡಿರುವೆನೆ? ನಾನೇ ಒಂದು ವೇಳೆ ಅವರನ್ನು ಸಂತೈಸಬೇಕೆಂದು ಭಾವಿಸಿದ್ದರೋ ಏನೋ? ಆದರೆ ನಾನು ಹಾಗೇನೂ ಮಾಡಲಿಲ್ಲ. ನಿನ್ನೆ ರಾತ್ರಿ ಸುಮಾರು ಮೂರು ಗಂಟೆಯ ವರೆಗೆ ಅವರ ನಿರೀಕ್ಷೆಯಲ್ಲಿದ್ದೆ. ಮತ್ತೆ ಮಲಗುಮನೆಯ ಬಾಗಿಲು ಬಿಗಿದು ಮಲಗಿದೆ."

"ಪಾಪ! ಆ ಮೇಲೆ ಬಂದು ಹಿಂದಿರುಗಿರಬಹುದು."

ಸುಮಿತ್ರೆಯು "ಅವರು ಬರಲೇ ಇಲ್ಲ. ನಾನೇ ಅವರನ್ನು ಮಾತಾಡಿಸ ಬೇಕೆಂದಿದ್ದಿರಬಹುದು" ಎಂದಳು. ಪೂರ್ಣೆ ದಯೆಯಿಂದ "ನೀನೇ ಅವ ರನ್ನು ಶಾಂತಪಡಿಸುವುದರಲ್ಲಿ ತಪ್ಪೇನಿದೆ?" ಎಂದಳು.

"ಏನೂ ಇಲ್ಲ. ಪ್ರಯೋಜನವೇ ಇರುತ್ತಿತ್ತು. ನಾನು ಕೇಳದೇನೇ ಎಷ್ಟೋ ಪದಾರ್ಥಗಳು ಬರುತ್ತಿದ್ದುವು."

"ಏನು ಚೇಷ್ಟೆ ಮಾಡುವೆ. ಪತಿಯು ಸಿಟ್ಟುಗೊಂಡರೆ ಅವನನ್ನು ಶಾಂತ ಗೊಳಿಸುವುದು ಸ್ತ್ರೀಯ ಕರ್ತವ್ಯವಲ್ಲವೆ?"

ಸುಮಿತ್ರೆಯು ಬುಸುಗುಟ್ಟುತ್ತಾ "ಹೂಂ. ಸ್ತ್ರೀಯು ಪುರುಷನ ಕಾಲಿನ ಚಪ್ಪಲಿ! ಪುರುಷನು ಹೇಗೆಬೇಕಾದರೂ ಇರಲಿ; ಕಳ್ಳನಿರಲಿ, ಕೊಲೆಗಡಕ ನಿರಲಿ, ವ್ಯಭಿಚಾರಿಯಾಗಿರಲಿ, ಕುಡಿಕನಿರಲಿ! – ಸ್ತ್ರೀಯ ಧರ್ಮವೇನು? ಅವನ ಪಾದ ತೊಳೆದು ನೀರು ಕುಡಿಯುವುದು, ಅಲ್ಲವೆ? ಅವರನ್ನು ಸಮಾಧಾನಪಡಿಸಲು ನಾನೇನು ಅಪರಾಧ ಮಾಡಿದ್ದೆನೆಂದು ಬೇಕಲ್ಲ? ಕೇಳೋಣ" ಎಂದಳು.

"ನೀನೇ ಯೋಚಿಸಿಕೊಳ್ಳಬೇಕು."

"ಚೆನ್ನಾಗಿ ಯೋಚಿಸಿರುವೆನು. ಅವರು ದುಡ್ಡಿನ ಸಾಮಾನನ್ನೆಂದೂ ತಂದದ್ದಿಲ್ಲ. ಒಂದು ನಾಲ್ಕೈದು ರೂಪಾಯಿ ಬೇಕಾದರೂ ಎಷ್ಟೋ ಬಾರಿ ಕೇಳಬೇಕಾಗುತ್ತಿತ್ತು. ಹಾಗಿರುವಾಗ ಎರಡು ರೇಶ್ಮೆಸೀರೆಗಳನ್ನು ತಂದು ದೇಕೆ? ಇದರಲ್ಲೇನೋ ರಹಸ್ಯವಿರಬೇಕೆಂದು ನಿನಗೂ ತಿಳಿದಿರಬಹುದು. ನನಗೆ ಮೊದಲೇ ಈ ವಿಷಯ ಸಂದೇಹವಿತ್ತು. ಮೊನ್ನೆ ಅದು ನಿಶ್ಚಿತ ವಾಯಿತು."

"ಸುಮಿತ್ರಾ, ನೀನು ಏನು ಮಾತಾಡುತ್ತಿರುವೆ? ಒಬ್ಬಳು ಸಹ ಧರ್ಮಿಣಿ; ಇನ್ನೊಬ್ಬಳು ವಿಧವೆ! ಹೀಗಿರುವಾಗ ಅವನು ನನ್ನನ್ನು ಕುದೃಷ್ಟಿ ಯಿಂದ ನೋಡುವುದೆಂದರೇನು? ನಾನು ಅವರನ್ನು ಇಂತಹ ಸ್ವಭಾವದವ ರೆಂದು ತಿಳಿಯುವುದಿಲ್ಲ."

ಸುಮಿತ್ರೆ ವೀಳ್ಯ ಹಾಕುತ್ತಾ, "ಸ್ವಭಾವವೆನ್ನಬೇಡ, ಪೂರ್ಣಾ. ಸ್ವಭಾವವೆಂದರೇನು, ವಿಧಿಲಿಪಿಯೋ? ಯಾರನ್ನು ನೀನು ಸಂಯಮಿಯೆಂದೆಣಿಸುವೆಯೋ, ಅವನು ಗಂಡುಗಲಿಯಾಗಿರುವನು. ಆದರೆ ಅವನು ಮನೆಯಲ್ಲಿ ಮಾತ್ರ ಬಾಣಗಳನ್ನು ಬಿಡುವನು. ಆದರೆ, ಒಂದು ಮಾತ್ರ, ಅವರಲ್ಲಿ ಯಾರಲ್ಲಿಯೂ ಇಲ್ಲದ ಒಂದು ಗುಣವಿದೆ. ನಾನೊಂದು ವೇಳೆ ರೋಗಪೀಡಿತಳಾದರೆ, ಎಲ್ಲಾ ಕೋಪಗಳೂ ಮಾಯವಾಗುವುವು." ಎಂದು ವ್ಯಾಖ್ಯಾನಿಸಿದಳು.

"ಹಾಗಾದರೆ ನೀನಿಂದು ಸುಖವಿಲ್ಲವೆಂದು ನಟಿಸಿದರೇನು?" ಎಂದು ಪ್ರಶ್ನಿಸಿದಳು ಪೂರ್ಣಾ.

"ಇಷ್ಟು ಬೇಗನೆ? ಇನ್ನೂ ನಾಲ್ಕಾರು ದಿನ ಅವರನ್ನುರಿಸಬೇಡವೆ?"

"ನೀನು ಬಹಳ ನಿರ್ದಯಿ, ಸುಮಿತ್ರಾ. ಇಂದೇ ನೀನು ಅವನ ಬಳಿ ಹೋಗಬೇಕು, ನನ್ನಾಣೆಯಿದೆ." ಎಂದು ಒತ್ತಾಯಿಸಿದಳು ಪೂರ್ಣಾ.

ಆದರೆ ಸುಮಿತ್ರೆಯು ಇಷ್ಟು ಬೇಗನೆ ಒಪ್ಪುವವಳಲ್ಲ. ಹೀಗೆ ಎಂಟು ಹತ್ತು ದಿನಗಳುರುಳಿದುವು. ಒಂದು ದಿನ ಮಧ್ಯರಾತ್ರಿ, ಸುಮಿತ್ರೆಯ ಕೋಣೆಯ ಬಾಗಿಲು ತೆರೆದ ಶಬ್ದವು ಕೇಳಿತು. ಕಮಲಾಪ್ರಸಾದನು ಬಂದುದಾಗಿರಬೇಕೆಂದು ಪೂರ್ಣೆಯು ಎಣಿಸಿದಳು; ತನ್ನ ಕೋಣೆಯ ಬಾಗಿಲಲ್ಲಿ ನಿಂತು ನೋಡಿದಳು.

ಸುಮಿತ್ರೆಯು ತನ್ನ ಕೋಣೆಯಿಂದ ಹೊರಟು ಸಂಶಯದೃಷ್ಟಿಯಿಂದ ನೋಡುತ್ತಾ, ಗಂಡನ ಕೋಣೆಯ ಕಡೆ ಹೋಗುವುದು ಕಂಡಿತು. "ಇಂದು ಇವಳ ಮನಸ್ಸು ಸೋತಿದೆ" ಎಂದೆಣಿಸಿದಳು. ನಿಜವಾಗಿ ಸುಮಿತ್ರೆಯಿಂದು ಪತಿಯನ್ನು ಕರೆತರಲು ಹೊರಟಿದ್ದಾಳೆ. ಪತಿಯ ಕೋಣೆಯ ಬಾಗಿಲನ್ನು ತಲಪಿದಳು. ಹೇಗೆ ಕರೆಯಲಿ? ಕಮಲಾಪ್ರಸಾದನ ಉಸಿರಿನ ಶಬ್ದವನ್ನು ಕೇಳಿ, ಅಲ್ಲಿಂದ ಓಡಿದವಳು ತನ್ನ ಕೋಣೆಯ ಬಾಗಿಲಲ್ಲೇ ತಡೆದುದು. ಅವಳ ಪ್ರೇಮಪೀಡಿತ ಹೃದಯವು ಮಾನದ ಆಟದ ಗೊಂಬೆಯಾಗಿತ್ತು. ರಮಣಿಯ ಮಾನವು ಅಜೇಯವಾಗಿತ್ತು; ಅಮರವಾಗಿತ್ತು; ಮಾತ್ರವಲ್ಲ, ಅನಂತವಾಗಿತ್ತು!

ಪೂರ್ಣೆಯು ಇನ್ನೂ ಬಾಗಿಲಲ್ಲೇ ನಿಂತಿರುವಳು. ಅವಳಿಗೆ ತನ್ನ ಸೌಭಾಗ್ಯದ ಒಂದು ದಿನದ ಚಿತ್ರವು ಕಾಣುತ್ತಿತ್ತು. ಅವಳಿಗೂ ಒಮ್ಮೆ ಪತಿಯ ಮೇಲೆ ಸಿಟ್ಟಾಗಿತ್ತು. ಕೆಲವು ದಿನಗಳ ಮೇಲೆ ಒಂದು ದಿನ ಅವನನ್ನು

ರಮಿಸಲು ಹೋಗಿದ್ದಳು. ಆದರೆ ಬಾಗಿಲಿನಿಂದಲೇ ಹಿಂದಿರುಗಿದ್ದಳು. ಸುಮಿತ್ರೆಯೊಡನೆ "ನೀನು ಒಳಗೆ ಹೋಗಿರುವೆಯಾ, ಅಥವಾ ದ್ವಾರದಿಂದಲೇ ಹಿಂದಿರುಗಿ ಬಂದೆಯಾ?" ಎಂದು ಕೇಳುವ ಮನಸ್ಸಾಯಿತೊಮ್ಮೆ. ಆದರೆ ಈ ದಶೆಯಲ್ಲಿ ಏನೂ ಕೇಳಬಾರದು ಎಂದು ನಿರ್ಧರಿಸಿದಳು. ಸುಮಿತ್ರೆಯು ತನ್ನ ಕೋಣೆಯ ಬಾಗಿಲನ್ನು ಮುಚ್ಚಿ, ದೀಪ ನಂದಿಸಿ, ಮಲಗಿದಳು. ಆದರೆ ಪೂರ್ಣೆಯು ಇನ್ನೂ ಬಾಗಿಲಲ್ಲಿ ನಿಂತಿರುವಳು. ಸುಮಿತ್ರೆಯ ವಿಯೋಗವ್ಯಥೆಯೆಷ್ಟು ದುಸ್ಸಹವೆಂದು ಆಲೋಚಿಸಿದೊಡನೆಯೇ ಅವಳ ಕೋಮಲ ಹೃದಯವು ದ್ರವಿಸಿತು. ಈ ವಿಷಯದಲ್ಲಿ ಅವಳ ಹೊಣೆಗಾರಿಕೆ ಯೇನೂ ಇಲ್ಲವೆ? ಇದೇ ರೀತಿ ತಟಸ್ಥವಾಗಿದ್ದು, ಆಟ ನೋಡುವುದೇ ಅವಳ ಕರ್ತವ್ಯವೆ? . . . . ಇದಕ್ಕೆಲ್ಲಾ ಕಾರಣ ಅವಳಾಗಿದ್ದಳು. ಹಾಗಾಗಿ, ಈ ಎರಡು ಪ್ರೇಮಿಗಳು ವಿಯೋಗಾಗ್ನಿಯಲ್ಲಿ ಬೇಯುವುದನ್ನವಳು ಕಾಣ ಬಹುದೇ? ಎಂದೂ ಸಾಧ್ಯವಿಲ್ಲ. ಈ ಮೊದಲೇ ಅವಳ ಮನಸ್ಸಿನಲ್ಲಿ ಕಮಲಾಪ್ರಸಾದನನ್ನು ಶಾಂತಪಡಿಸಬೇಕೆಂದು ಬಗೆದಿದ್ದಳು. ಆದರೆ ಅನೇಕ ಶಂಕೆಗಳು ಅಡ್ಡಿಗಳಾಗಿದ್ದುವು. ಇಂದು ಕರುಣೆಯು ಆ ಶಂಕೆಗಳನ್ನು ಸೋಲಿಸಿತು. ಅವಳು ಕಮಲಾಪ್ರಸಾದನನ್ನು ಸಂತೈಸಲು ಹೋದಳು. ಅವಳ ಮನಸ್ಸಿನಲ್ಲಿ ಯಾವ ತರದ ಸಂದೇಹವೂ ಇಲ್ಲ; ಕಮಲಾಪ್ರಸಾದ ನನ್ನು ತನ್ನ ಅಣ್ಣನೆಂದು ಮೊದಲಿನಿಂದಲೇ ತಿಳಿದಿದ್ದಳು; ಅಣ್ಣನೆಂದೇ ಕರೆಯು ತ್ತಿದ್ದಳು. ಅಷ್ಟೇ ಅಲ್ಲ, ಅವನ ಕೋಣೆಯ ಒಳಗೆ ಹೋಗಬೇಕಾದ ಅಗತ್ಯವೂ ಇಲ್ಲ; ಬಾಗಿಲಲ್ಲೇ ನಿಂತು ಕರೆಯಬಹುದು, ಕರೆದು ಹೇಳ ಬಹುದು; "ಅತ್ತಿಗೆಗೆ ಜ್ವರ ಬರುತ್ತದೆ; ನೀವೊಮ್ಮೆ ಬರಬೇಕು" ಇಷ್ಟು ಹೇಳಿ ಬಂದೇ ಬಿಡುವುದು. ಈ ಸುದ್ದಿ ಕೇಳಿದೊಡನೆಯೇ ಅವನು ಓಡಿಬಂದಾನು. ಅದರಲ್ಲಿ ಸಂದೇಹವೇ ಇಲ್ಲ. ಮೂರು ವರ್ಷಗಳ ವೈವಾಹಿಕ ಜೀವನದ ಅನುಭವವಿದ್ದರೂ, ಅವಳಿಗೆ ಪುರುಷ ಸಮಾಜದ ಅನುಭವವಿರಲಿಲ್ಲ. ತನ್ನ ಮಾವನ ಹಳ್ಳಿಯಲ್ಲಿ ತನ್ನ ಬಾಲ್ಯವನ್ನು ಕಳೆದಿದ್ದಳು. ಅಲ್ಲಿ ಅವಳನ್ನೆಲ್ಲರೂ ಅಕ್ಕ ಅಥವಾ ತಂಗಿ ಎನ್ನುತ್ತಿದ್ದರು. ಕುತ್ಸಿತವಾದ ನೆರಳಿಂದ ವಿರಹಿತ ವಾದ ವಾತಾವರಣದಲ್ಲವಳು ವಿಹರಿಸುತ್ತಿದ್ದಳು. ವಿವಾಹವೂ ಅಂಥಲ್ಲೇ ಆಯಿತು. ಆಕೆಯ ಪತಿಯು ಯುವಕನಾಗಿದ್ದರೂ ಬಾಲಕನಂತಿದ್ದ. ನೆರೆಯ ಸ್ತ್ರೀಯರು ಯಾರಾದರೂ ಮನೆಗೆ ಬಂದರೆ ಅವರು ಹೊರಡುವ ವರೆಗೆ ಮನೆಯೊಳಗೆ ಹೊಗುತ್ತಿದ್ದಿಲ್ಲ. ಅಂಥಾ ಲಜ್ಜಾಶೀಲ. ಅವಳು ಕಮಲಾಪ್ರಸಾದನ ಕೋಣೆಯನ್ನು ತಲಪಿ, ಬಾಗಿಲನ್ನು ಮೆಲ್ಲಗೆ ತಟ್ಟಿದಳು.

ಅವನಿಗೆ ನಿದ್ದೆ ಬಂದಿರಲಿಲ್ಲ. ಕೂಡಲೇ ಅವನು ಬಾಗಿಲನ್ನು ತೆರೆದನು. ಪೂರ್ಣಾ!! ಅವನಿಗೆ ಆಶ್ಚರ್ಯವಾಯಿತು. ಕುತೂಹಲದಿಂದ ಮಾತಿಗಾರಂಭಿಸಿದನು; "ಏಕೆ ಪೂರ್ಣಾ, ಒಳಗೆ ಬಾ" ಎಂದು ಕರೆದನು.

ಪೂರ್ಣೆಯು ಸುಮಿತ್ರೆಯ ಅಸೌಖ್ಯದ ಮಾತೆತ್ತಲಿಲ್ಲ; ಅವಳಿಗೆ ಸುಳ್ಳು ಹೇಳುವ ಕ್ರಮವೇ ಗೊತ್ತಿದ್ದಿಲ್ಲ. ಒಂದು ಕ್ಷಣ ಅನಿಶ್ಚಿತಾವಸ್ಥೆಯಲ್ಲೇ ನಿಂತಳು. ಯಾವ ಮಾತೂ ಅವಳಿಗೆ ಹೊಳೆಯುತ್ತಿದ್ದಿಲ್ಲ. ಕಡೆಗೆ "ಏನು, ನಿಮಗೆ ಸುಮಿತ್ರೆಯಲ್ಲಿ ಸಿಟ್ಟೆ? ನಿಮ್ಮನ್ನು ಸಂತೈಸಲು ಒಮ್ಮೆ ಅವಳಿಲ್ಲಿ ಬಂದಿದ್ದಳು." ಎಂದಳು.

"ಇಲ್ಲಿಗೆ ಬಂದಿದ್ದಳೆ? ಸುಳ್ಳು. ಇಲ್ಲಿ ಯಾರೂ ಬಂದದ್ದಿಲ್ಲ. ನನ್ನ ಬಳಿ ಯಾರು ಬರುವರು ಪೂರ್ಣಾ? ನಾನು ಸತ್ತರೂ ಯಾರೂ ನನ್ನನ್ನು ಕೇಳುವವರಿಲ್ಲ. ಒಂದು ವೇಳೆ ತಂದೆತಾಯಿಗಳು ಅತ್ತಾರು."

ಪೂರ್ಣೆಗೂ ಆಶ್ಚರ್ಯವಾಯಿತು. ಸುಮಿತ್ರೆ ಮತ್ತೆಲ್ಲಿ ಹೋಗಿದ್ದಾಳು? ಎಂದೆಣಿಸಿ, "ನಾನು ಈಗ ಅವಳು ಇಲ್ಲಿಗೆ ಬಂದುದನ್ನೂ ಹಿಂತಿರುಗಿದುದನ್ನೂ ನೋಡಿದೆ. ನಿಮ್ಮ ಬಳಿ ಬಂದುದೆಂದೇ ನಾನು ತಿಳಿದೆ. ಈ ರೀತಿ ಎಷ್ಟು ದಿನ ಕೋಪಿಸಿಕೊಂಡಿರಬಹುದು? ಪಾಪ, ಅವಳು ಬಹಳ ದುಃಖಪಡುತ್ತಿರುವಳು." ಎಂದು ಹೇಳಿದಳು.

ಕಮಲಾಪ್ರಸಾದನು ಸಮೀಪಕ್ಕೆ ಬಂದು ಮಾತಿಗಾರಂಭಿಸಿದನು. "ಇಲ್ಲಿಯೇ ನಿಂತಿರುವುದೇಕೆ? ಒಳಗೆ ಬರಬಾರದೆ? ಮಾತಾಡಲಿದೆ." ಹೀಗೆನ್ನುತ್ತಾ ಅವನು ಪೂರ್ಣೆಯ ಕೈಹಿಡಿದು ಒಳಗೆಳೆದನು. ಬಾಗಿಲ ಅಗಳಿಯನ್ನು ಬಿಗಿದನು. ಅವಳ ಎದೆ ದಡದಡನೆ ಬಡಿಯತೊಡಗಿತು. ಆವೇಶಯುಕ್ತ ಕಠೋರ, ಉಗ್ರಸ್ಪರ್ಶವು ಅವಳಿಗೆ ಸರ್ಪದಂತೆ ಅನಿಸಿತು. ಕರ್ಮೇಂದ್ರಿಯಗಳೆಲ್ಲ ಶಿಥಿಲವಾದುವು. ಥರಥರನೆ ಕಂಪಿಸುತ್ತಾ ಬಾಗಿಲಿಗೆ ತಾಗಿ ನಿಂತುಕೊಂಡಳು. ಕಮಲಾಪ್ರಸಾದನು ಅವಳ ವಿಹ್ವಲತೆಯನ್ನು ಕಂಡು ಪಲ್ಲಂಗದಲ್ಲಿ ಕುಳಿತನು; ಬಳಿಕ ಆಶ್ವಾಸನ ಕೊಡತೊಡಗಿದನು; "ಹೆದರಬೇಡ, ಪೂರ್ಣಾ. ಆರಾಮವಾಗಿ ಕುಳಿತಿರು, ನಾನೂ ಮನುಷ್ಯನಷ್ಟೆ. ನನ್ನನ್ನು ಕಂಡೊಡನೆಯೇ ಇಷ್ಟೇಕೆ ಹೆದರುವೆ? ನೀನು ಸೀರೆಯನ್ನು ತೆಗೆದುಕೊಳ್ಳದ ದಿನ ನನಗೆಷ್ಟು ವ್ಯಸನವಾಗಿದೆ ಗೊತ್ತೇ?"

"ನಾನು ಹೇಗೆ ಸ್ವೀಕರಿಸಲಿ? ಸುಮಿತ್ರೆಯು ಏನು ಗ್ರಹಿಸುತ್ತಿದ್ದಳು?"

ಕಮಲಾಪ್ರಸಾದನು ಈ ಮಾತನ್ನು ಕೇಳಲಿಲ್ಲ. ಅವನ ಆತುರದೃಷ್ಟಿ ಪೂರ್ಣೆಯ ರಕ್ತಹೀನ ಮುಖದಲ್ಲಿ ನಾಟಿಕೊಂಡಿತ್ತು. ಅವನ ಹೃದಯದಲ್ಲಿ

ಕಾಮುವಾಸನೆಯು ಪ್ರಚಂಡ ಜ್ವಾಲೆಯೆದ್ದಿತು. ಅವನ ಚೇಷ್ಟೆ, ಚೇತನ ಮತ್ತು ಪ್ರವೃತ್ತಿಗಳು, ಒಂದು ವಿಚಿತ್ರ ಹಿಂಸಾಭಾವದಿಂದ ಆಂದೋಲಿತ ವಾಗಿದ್ದುವು. ವನ್ಯಪಶುಗಳು ಬೇಟೆಯಾಡುವಾಗ ಅವುಗಳ ಕಣ್ಣುಗಳಲ್ಲಿ ಜ್ವಲಿಸುವ ಸ್ಫೂರ್ತಿಯಂತಹ ಸ್ಫೂರ್ತಿಯು ಇವನ ಕಣ್ಣುಗಳಲ್ಲೂ ಹೊಳೆ ಯುತ್ತಿತ್ತು. ಅವನು ಪಲ್ಲಂಗದಿಂದೆದ್ದನು. ತನ್ನ ಎರಡೂ ಬಾಹುಗಳನ್ನು ಚಾಚುತ್ತಾ ಆಕೆಯ ಬಳಿ ಸರಿದನು. ಭಯದಿಂದ ಕಂಪಿಸುತ್ತಿದ್ದ ಪೂರ್ಣಾ, ಈಗ ತನ್ನ ಬಳಿ ಬಳಿಗೆ ಬರುತ್ತಿದ್ದ ಕಮಲಾಪ್ರಸಾದನನ್ನು ಕಿಡಿಕಾರುವ ಕಣ್ಣುಗಳಿಂದ ನೋಡಿದಳು. ಈ ನೋಟದಲ್ಲಿ ಭೀಷಣ ಸಂಕಟ ಮತ್ತು ಭಯ ತುಂಬಿಕೊಂಡಿತು. ಅದು "ಜಾಗ್ರತೆ! ಒಂದು ಹಜ್ಜೆಯನ್ನು ಮುಂ ದಿಟ್ಟರೆ ನಮ್ಮಿಬ್ಬರೊಳಗೊಬ್ಬರ ಅಂತ್ಯವಾಗುವುದು ನಿಶ್ಚಯ!" ಎಂದು ಹೇಳು ವಂತಿತ್ತು. ಈ ಸಮಯದಲ್ಲಿ ಪೂರ್ಣೆಗೆ ಅಸೀಮಶಕ್ತಿಯ ಅನುಭವವಾ ಯಿತು. ಅವಳ ಕಣ್ಣುಗಳ ಆ ಪ್ರದೀಪ್ತಜ್ವಾಲೆ, ಬಿಗಿದ ಮುಷ್ಟಿ, ಏರಿಳಿ ಯುವ ಎದೆ, ಇವುಗಳನ್ನು ಕಂಡು ಕಮಲಾಪ್ರಸಾದನು ಬೆದರಿದನು. ಒಂದು ಹಜ್ಜೆ ಮುಂದಿಡುವ ಧೈರ್ಯವೂ ಅವನಿಗಾಗಲಿಲ್ಲ. ಅಲ್ಲೇ ನಿಂತುಕೊಂಡೇ "ಈ ರೂಪವನ್ನು ಧರಿಸಬೇಡ, ಪೂರ್ಣಾ. ಪ್ರೇಮದಂತಹ ವಸ್ತುವು ಬಲಾತ್ಕಾರದಿಂದ ದೊರೆಯುವುದಿಲ್ಲವೆಂದು ನನಗೆ ಗೊತ್ತಿದೆ. ಈ ಇರಾದೆ ಯಿಂದ ನಿನ್ನ ಬಳಿ ಬರುತ್ತಿದ್ದುದಲ್ಲ. ನಾನು ನಿನ್ನ ಕೃಪಾದೃಷ್ಟಿಯನ್ನು ಮಾತ್ರ ಆಶಿಸುತ್ತೇನೆ. ಯಾವ ದಿನ ನಿನ್ನ ಮಧುರರೂಪವನ್ನು ನೋಡಿದ್ದೆನೋ, ಅಂದಿನಿಂದ ನಿನ್ನ ಉಪಾಸನೆಗಾರಂಭಿಸಿದ್ದೇನೆ. ಪಾಷಾಣ ಪ್ರತಿಮೆಗಳ ಉಪಾಸನೆಯು ಪತ್ರಪುಷ್ಪಗಳಿಂದಾಗುತ್ತಿದೆ; ಆದರೆ ನಿನ್ನ ಪೂಜೆಯನ್ನು ನಾನು ಕಣ್ಣೀರಿನಿಂದಲೇ ಮಾಡುವೆನು. ನಾನು ಸುಳ್ಳು ಹೇಳುವುದಲ್ಲ, ಪೂರ್ಣಾ! ನಿನ್ನ ಸಂಕೇತ ದೊರೆತೊಡನೆಯೇ ನನ್ನ ಪ್ರಾಣವನ್ನು ಬೇಕಾದರೂ ನಿನ್ನ ಚರಣತಲದಲ್ಲರ್ಪಿಸುತ್ತೇನೆ. ಇದೇ ನನ್ನ ಅಭಿಲಾಷೆ. ನಿನ್ನನ್ನು ಮರೆತು ಬಿಡಬೇಕೆಂದು ಅನೇಕ ಸಲ ಎಣಿಸಿದೆ. ಆದರೆ ಮನಸ್ಸು ಕೇಳು ವುದಿಲ್ಲ. ಎಲ್ಲಿಯೋ ಪೂರ್ವಜನ್ಮದಲ್ಲಿ ನಿನಗೂ ನನಗೂ ಏನೋ ಸಂಬಂಧ ವಿದ್ದಿರಬೇಕು. ಅಷ್ಟೇ ಅಲ್ಲ, ಆ ಜನ್ಮದಲ್ಲಿಯೂ ತನ್ನ ಇಚ್ಛಾಪೂರ್ತಿ ಯಾಗದೆ ಅತೃಪ್ತವಾಗಿದ್ದಿರಬೇಕು. ನಿನ್ನ ಚರಣಗಳಲ್ಲಿ ಬಿದ್ದು, ಮನಸ್ವೀ ಅಳಬೇಕೆಂಬ ಇಚ್ಛೆಯಿಂದಲೇ ನಿನ್ನನ್ನು ಕರೆತಂದೆ. ನನ್ನ ಜೀವನವು ನಿನ್ನ ದಯೆಯನ್ನು ಹೊಂದಿಕೊಂಡಿದೆಯೆಂದು ತಿಳಿದರೆ ಸಾಕು." ಎಂದು ಉಪ ನ್ಯಾಸಕ್ಕಾರಂಭಿಸಿದನು.

ಪೂರ್ಣೆಯ ಕೋಪವು ಶಾಂತವಾಯಿತು. "ನೀವು ಎಂತಹ ಮಾತುಗಳನ್ನಾಡುತ್ತಿರುವಿರಿ, ನಾಚಿಕೆಯಿಲ್ಲವೇ?" ಎಂದು ನಡುಗುವ ಧ್ವನಿಯಿಂದ ಕೇಳಿದಳು.

ಕಮಲಾಪ್ರಸಾದನು ಕುಳಿತುಕೊಳ್ಳುತ್ತಾ ಮಾತಿಗಾರಂಭಿಸಿದನು. "ಇದರಲ್ಲಿ ನನಗೆ ಲಜ್ಜೆಯು ಯಾವ ವಿಷಯವೂ ಕಾಣುವುದಿಲ್ಲ. ತನ್ನ ಇಷ್ಟ ದೇವತೆಯನ್ನು ಪೂಜಿಸುವುದು ಲಜ್ಜೆಯೇನು? ಪ್ರೇಮವೆಂದರೆ ಈಶ್ವರೀ ಪ್ರೇರಣೆಯಲ್ಲವೆ? ಅದು ಈಶ್ವರನ ಸಂದೇಶವೆನ್ನುವುದರಲ್ಲಿ ಸಂದೇಹವಿದೆಯೆ? ವಿವಾಹವೆಂದರೇನು? ಸಮಾಜದ ಸಂಘಟನೆ ಮಾತ್ರ. ಪ್ರೇಮಸುಖದ ಕಲ್ಪನೆಯನ್ನು ಮಾಡುವುದು ಕೂಡ ಪಾಪವೆನ್ನುವ ಅವಸ್ಥೆಗೆ ನಿನ್ನನ್ನು ಕಾಲನ ಕುಚಕ್ರವು ದೂಡಿತು. ಯೋಚಿಸಿ ನೋಡಿದರೆ, ಇದೊಂದು ಸಮಾಜದ ಘೋರ ಅನ್ಯಾಯವಲ್ಲವೆ? ಎರಡು ಮೂರು ವರ್ಷ ಪ್ರೇಮಸುಖವನ್ನುಂಡು, ಮತ್ತೆ ಆಮರಣವೂ ವೈಧವ್ಯದ ಯಾತನೆಯನ್ನನುಭವಿಸಲಿಕ್ಕೆಂದೇ ಈಶ್ವರನು ನಿನಗೆ ಜನ್ಮವಿತ್ತನೆ? ಹಾಗೆಂದೂ ಆಗಲಾರದು. ಭಗವಂತನು ಅಂತಹ ಅನ್ಯಾಯಗಾರನಲ್ಲ. ವಸಂತಕುಮಾರನು ನನ್ನ ಆಪ್ತಮಿತ್ರನಾಗಿದ್ದ. ಇಂದು ಕೂಡ ಅವನ ನೆನಪಾಗುವಾಗ, ನನಗೆ ಕಣ್ಣೀರು ಬರುತ್ತದೆ. ನಿನ್ನಲ್ಲಿ ಅವನಿಗೆಷ್ಟು ಪ್ರೇಮವಿತ್ತೆಂದು ನನಗೆ ಗೊತ್ತು. ನಿನಗೆ ಸ್ವಲ್ಪ ಅಸುಖವಾದರೆ ಅವನು ವಿಕಲನಾಗುತ್ತಿದ್ದ. ನಿನ್ನ ಉದಾಸೀನತೆಯನ್ನು ನೋಡಿ ಅವನ ಎದೆಯು ಒಡೆಯುತ್ತಿತ್ತು. ನೀನು ಅಳುವುದನ್ನು ನೋಡಿದರೆ ಅವನಿಗೆಷ್ಟು ದುಃಖವಾಗುತ್ತಿತ್ತು! ಆದರೆ ಇಂದು ಆ ಮಾತುಗಳೆಲ್ಲಿವೆ? ಇಂದು ನೀನು ವರ್ಷಗಟ್ಟಳೆ ಕೂಗಿಕೊಂಡಿದ್ದರೂ ಕೇಳುವವರಿರುವರೆ? ನಿರ್ದಯಿ ಸಮಾಜವು ಇದನ್ನೇ ಆಶಿಸುತ್ತದೆ. ಆ ಆತ್ಮಕ್ಕೆ ನಿನ್ನ ಈ ವ್ಯಸನವನ್ನು ನೋಡಿ ಎಷ್ಟು ದುಃಖವಾಗಬಹುದೆಂದು ಕಲ್ಪಿಸಿರುವೆಯಾ? ನೀನೀ ಶೋಕಸಾಗರದಲ್ಲಿ ಮುಳುಗಿರುವುದನ್ನು ಭಗವಂತನು ಬಯಸುವನೆ? ಎಂದಿಗೂ ಇಲ್ಲ. ನಿನ್ನನ್ನು ಈ ಚಿಂತೆಯ ಚಿತೆಯಿಂದ ಉದ್ಧರಿಸುವುದೇ ಅವನ ಆಸೆ. ಈ ಆಸೆಯು ಅವನಿಗೇ ಇಲ್ಲವಾದರೆ ನನ್ನಂತಹ ದುರ್ಬಲ ಮನುಷ್ಯನಲ್ಲಿ ಪ್ರೇಮೋದಯವಾಗುವುದೇ? ಯಾವನು ಇಂದಿನ ವರೆಗೆ ಯಾವ ಸ್ತ್ರೀಯನ್ನಾದರೂ ಕಣ್ಣೆತ್ತಿ ನೋಡಿಲ್ಲವೋ, ಅವನು ನಿನ್ನ ಮುಂದೆ ಬದ್ಧಾಂಜಲಿಯಾಗಿ ಪ್ರೇಮಭಿಕ್ಷೆಯನ್ನು ಬೇಡುವನೇ? ಇದು ದೈವಪ್ರೇರಣೆಯೆಂದೇ ನಾನು ತಿಳಿಯುತ್ತೇನೆ."

ಬಾಗಿಲಿಗಂಟಿದ್ದ ಪೂರ್ಣೆಯು ನೆಲಕ್ಕೆ ಹಾಸಿದ್ದ ಕಂಬಳಿಯ ಮೇಲೆ ಕುಳಿತಳು. ಕಮಲಾಪ್ರಸಾದನ ಮೇಲಿದ್ದ ಅವಳ ಸಂದೇಹವು ವಾಯು

ವಾಗುತ್ತ ಬಂತು. ಅವಳು ತನ್ಮಯಳಾಗಿ ಅವನ ಮಾತುಗಳನ್ನು ಕೇಳು ತ್ತಿದ್ದಳು.

ಕಮಲಾಪ್ರಸಾದನು ನೆಲದಲ್ಲಿ ಕುಳಿತವಳನ್ನು ಕೈಹಿಡಿದು "ಪೂರ್ಣಾ, ಇಲ್ಲಿ ಆಗದು. ನೀನು ಇಲ್ಲಿಯೇ ಕುಳಿತರೆ ನಾನೂ ಇಲ್ಲಿಯೇ ಕುಳಿತಿರ ಬೇಕಾಗುವುದು. ಈ ಕುರ್ಚಿಯಲ್ಲಿ ಕುಳಿತರೇನು?" ಎಂದನು.

ಪೂರ್ಣೆಯು ತನ್ನ ಕೈಯನ್ನು ಕೊಸರಿಕೊಳ್ಳಲಿಲ್ಲ. ಆ ಪ್ರಯತ್ನವನ್ನೂ ಮಾಡಲಿಲ್ಲ. "ನೀವೇಕೆ ಒತ್ತಾಯ ಮಾಡುವಿರಿ? ನಾನು ಅಲ್ಲಿ ಕುಳಿತರೆ ನೋಡಿದವರೇನೆಂದಾರು?" ಎಂದು ಹೇಳುತ್ತಾ ಕುರ್ಚಿಯಲ್ಲಿ ಕುಳಿತಳು.

ಕಮಲಾಪ್ರಸಾದನ ಮುಖವರಳಿತು. "ಯಾರಾದರೂ ಏನಾದರೂ ಹೇಳಿದರೆ ಅವರು ಮೂರ್ಖರೆನ್ನೋಣ. ಅದನ್ನೆಲ್ಲಾ ಮನಸ್ಸಿಗೆ ತೆಗೆದು ಕೊಂಡರಾಗುವುದೇ ಪೂರ್ಣಾ? ಎಲ್ಲಿ ನೋಡಿದರೂ ಕಪಟ; ಎಲ್ಲಿ ನೋಡಿ ದರೂ ಬೂಟಾಟಕೆ. ಈ ಪ್ರಪಂಚವೇ ಕಪಟ-ಬೂಟಾಟಿಕೆಗಳ ಬಲದಿಂದ ನಿಂತುದೊ ಎನಿಸುತ್ತದೆ. ನಾವು ಈ ಬೂಟಾಟಿಕೆಯ ಅಂತ್ಯಮಾಡೋಣ. ನಾನು ಇಂದಿನ ವರೆಗೆ ಯಾವ ಸ್ತ್ರೀಯಲ್ಲೂ ದೃಷ್ಟಿ ಬೀರಿರಲಿಲ್ಲ. ಇದು ಸತ್ಯ. ನೀನು ನನ್ನ ಹೃದಯದಲ್ಲಿ ಒಂದು ಆಂದೋಲನವನ್ನುಂಟುಮಾಡಿದೆ. ಆಗಲೇ ನಾನು ಇದು ಈಶ್ವರಪ್ರೇರಣೆಯೆಂದು ತಿಳಿದುಕೊಂಡೆ. ಸ್ವಲ್ಪ ಆಲೋಚಿಸು. ಇದರಲ್ಲಿ ಕಾಣದ ಕೈಯ ಆಟವಿಲ್ಲವೆಂದಾದರೆ ನೀನು ಈ ಮನೆಗೆ ಬರು ತ್ತಿದ್ದೆಯಾ? ಅಷ್ಟೇ ಏಕೆ? ಈ ಮಧ್ಯರಾತ್ರಿಯ ಕಾಲದಲ್ಲಿ ನೀನು ಇಲ್ಲಿ ಬಂದುದೇ ವಿಧಿಸಂಕೇತದಿಂದಲ್ಲವೆ?" ಎನ್ನುತ್ತ ಅವಳ ಕಪೋಲವನ್ನು ಬೆರಳಿ ನಿಂದ ಮುಟ್ಟಿದನು. ಅವಳ ಮುಖವು ಆರಕ್ತವಾಯಿತು. ಗಲಿಬಿಲಿಯಿಂದ ಮುಖವನ್ನು ತಿರುಗಿಸಿದಳು. ಆದರೆ ಕುರ್ಚಿಯಿಂದೇಳಲಿಲ್ಲ. ಅಲ್ಲಿಂದ ಓಡಲೂ ಇಚ್ಛಿಸಲಿಲ್ಲ. ಈ ಮಾತುಗಳನ್ನು ಕೇಳುವಾಗಲೆಲ್ಲ ಅವಳಿಗೆ ಏನೋ ಒಂದು ರೀತಿಯಾಯಿತು. ಅದು ಹೇಳುವಂತಹುದಲ್ಲ. ವಿವಾಹ ಮಂಟಪದಲ್ಲಿ ನಿಂತುಕೊಂಡಿರುವ ಯುವತಿಯರಿಗೆ ಹೇಗಾಗುವುದೋ ಅದೇ ರೀತಿಯದು.

ಕಮಲಾಪ್ರಸಾದನಿಗೆ ಸೀರೆಗಳ ನೆನಪು ಬಂತು. ಎರಡೂ ಸೀರೆಗಳನ್ನು ತನ್ನ ಪೆಟ್ಟಿಗೆಯಲ್ಲೇ ಇಟ್ಟುಕೊಂಡಿದ್ದನು. ಅದರಿಂದೊಂದನ್ನು ತೆಗೆದು ಅವಳ ಮುಂದಿಟ್ಟನು. "ಇದನ್ನು ನೋಡು, ಅದೇ ಸೀರೆ. ಇದನ್ನು ಇಂದಾ ದರೂ ನನಗಾಗಿ ಸ್ವೀಕರಿಸು. ಒಂದು ಕ್ಷಣಕ್ಕೆ ಇದನ್ನುಟ್ಟುಕೊ. ನಿನ್ನೀ ಬಿಳಿ ಸೀರೆಯು ನನ್ನ ಹೃದಯಕ್ಕೇ ಬರೆಯೆಳೆಯುತ್ತದೆ. ಇದನ್ನು ನಿನಗಾಗಿಯೇ

ತಂದುದು. ಸುಮಿತ್ರೆಗೆ ಸಂದೇಹವಾಗಬಾರದೆಂದು ಅವಳಿಗೊಂದನ್ನು ತರ ಬೇಕಾಯಿತು. ಒಂದೇ ಒಂದು ಕ್ಷಣ – ಈ ಸೀರೆಯು ನಿನಗೊಪ್ಪುವುದೇ ಎಂದು ನೋಡಿಕೊಳ್ಳುವುದಕ್ಕೆ ಮಾತ್ರ ಧರಿಸಬೇಕು. ನೀನೊಪ್ಪದಿದ್ದರೆ ನಾನೇ ಒತ್ತಾಯದಿಂದ ತೊಡಿಸುವೆನು." ಎಂದನು.

ಪೂರ್ಣೆಯು ಅದನ್ನು ತೆಗೆದುಕೊಂಡಳು. ಅವಳ ದೃಷ್ಟಿಯು ಅದರ ಮೇಲೆಯೇ ನೆಟ್ಟಿತು. "ಅಷ್ಟು ಅವಸರವೇನು? ಇಲ್ಲಿ ನಾನು ಉಡುವು ದಾದರೂ ಹೇಗೆ?" ಎಂದು ಪ್ರಶ್ನಿಸಿದಳು.

"ನಾನು ತೊಲಗಿದರೆ?" ಎಂದನು ಕಮಲಾಪ್ರಸಾದ.

ಆ ಕೋಣೆಯ ಪಕ್ಕದಲ್ಲಿ ಇನ್ನೊಂದು ಸಣ್ಣ ಕೋಣೆಯಿತ್ತು. ಇದು ಆತನ ಓದುಕೋಣೆ. ಅದರ ಬಾಗಿಲಿಗೊಂದು ತೆರೆಯಿಳಿಸಿತ್ತು. ಕಮಲಾ ಪ್ರಸಾದನು ತೆರೆ ಸರಿಸಿ ಆ ಕೋಣೆಯೊಳಗೆ ಹೋದನು. ಆದರೆ, ಏಕಾಂತ ವಾದರೂ ಪೂರ್ಣೆಗೆ ಸೀರೆಯನ್ನುಡಲಾಗಲಿಲ್ಲ. ಉಡುವ ಆಶೆಯಿತ್ತು. ಆದರೆ ಕಮಲಾಪ್ರಸಾದನು ಮನಸ್ಸಿನಲ್ಲಿ ಯಾವ ಆಶೆಯನ್ನು ತುಂಬಿಕೊಂ ಡಿರುವನೆಂಬುದೇ ಸಂದೇಹ.

ಕಮಲಾಪ್ರಸಾದನು ಪರದೆಯ ಮರೆಯಿಂದಲೇ "ಉಟ್ಟಾಯಿತೆ? ಹೊರಗೆ ಬರಬಹುದೇ?" ಎಂದು ಕೇಳಿದನು. ಪೂರ್ಣೆಯು ಮುಗುಳು ನಗುತ್ತಾ "ಆಯಿತು; ಉಟ್ಟುಕೊಂಡೆ" ಎಂದಳು.

ತೆರೆ ಸರಿಯಿತು. ಪೂರ್ಣೆಯು ನಕ್ಕಳು. ಪುನಃ ಅವನು ತೆರೆಯ ಮರೆಗೆ ಸರಿದನು. "ಇನ್ನೂ ನೀನು ಉಟ್ಟುಕೊಳ್ಳದಿದ್ದರೆ, ನಾನೇ ಉಡಿಸುವೆ ನೆ"ಂದು ಅಲ್ಲಿಂದಲೇ ಹೇಳಿದನು.

ಪೂರ್ಣೆಯು ಸೀರೆಯನ್ನುಡಲಿಲ್ಲ, ನಿಜ. ಆದರೆ ಉಟ್ಟುಕೊಳ್ಳುವಂತೆ ಅದರ ತುದಿಯನ್ನು ಹಿಡಿದುಕೊಂಡಿದ್ದಳು. ಎದುರಿಗೊಂದು ಕನ್ನಡಿಯಿತ್ತು. ಅದರ ಮೇಲೆ ಅವಳ ಕಣ್ಣು ಊರಿಕೊಂಡಿತು. ತನ್ನ ರೂಪಕ್ಕೆ ತಾನೇ ಮರುಳಾದಳು. ಆಗಲೇ ಅವಳ ಮನಸ್ಸಿನಲ್ಲಿ ಗ್ಲಾನಿಯುಂಟಾಯಿತು. ಅವಳ ಮರ್ಮಸ್ಥಳದಲ್ಲಿ ಎಲ್ಲಿಂದಲೊ ಸ್ವರವುಂಟಾಯಿತು; ಪೂರ್ಣಾ, ಜಾಗ್ರತೆ! ಯಾವ ಪಥವನ್ನು ಹಿಡಿದಿರುವೆ? ಆ ಮಾರ್ಗ ತೆರೆದಿಲ್ಲ. ನೀನು ಅದರಲ್ಲಿ ಹಜ್ಜೆಯಿಡಬೇಡ," ಸೀರೆಯನ್ನು ಬಿಸಾಡುವುದರೊಳಗೆ ಕಮಲಾ ಪ್ರಸಾದನು ಹೊರಬಂದನು. "ಕಡೆಗೂ ನೀನು ಉಡುವಂತಿಲ್ಲ! ನನ್ನೀ ಮಾತನ್ನು ನೀನು ನಡೆಸುವುದಿಲ್ಲ!" ಎಂದನು.

ಪೂರ್ಣೆಯು ಸೀರೆಯನ್ನಲ್ಲೇ ಕೆಳಗಿಟ್ಟಿದ್ದಳು. ಕಮಲಾಪ್ರಸಾದನು ಬೆರಳು ತೋರಿಸಿ, "ಇದನ್ನೇಕೆ ಇಲ್ಲಿಯೇ ಇಡುವೆ?" ಎಂದು ಕೇಳಿದನು.

"ಮತ್ತೆಲ್ಲಿಡಲಿ? ತಾವು ಎಷ್ಟೋ ಉಪಕಾರ ಮಾಡಿದಿರಿ. ನಾನು ಇಷ್ಟು ಮುಂಬರಿದುದಕ್ಕೇ ಭಗವಂತನು ಯಾವ ದಂಡ ವಿಧಿಸುವನೊ?"

"ದಂಡಿಸನು, ಪೂರ್ಣಾ. ಇದು ಅವನದೇ ಆಜ್ಞೆ. ನೀನು ಅದಕ್ಕಾಗಿ ಚಿಂತಿಸಬೇಕಾದ್ದಿಲ್ಲ . . . . ನಿಂತೇ ಇರುವೆಯೇಕೆ? ಈಗಲೇ ರಾತ್ರಿ ಬಹಳ ವಾಯಿತು . . . . ಏನು, ಈಗಲೇ ಓಡುವ ಇಚ್ಛೆಯೆ?"

ಪೂರ್ಣೆಯು ಬಾಗಿಲನ್ನು ಸಮೀಪಿಸಿದ್ದಳು. "ನನ್ನ ಜೀವನವನ್ನು ಭ್ರಷ್ಟಮಾಡುವಿರೇಕೆ? ನೀವು ಗಂಡುಸರು. ಗಂಡುಸರು ಏನು ಮಾಡಿದರೂ ಕ್ಷಮೆಯಿದೆ. ನಾನು ಹೆಂಗುಸು. ನಾನೆಲ್ಲಿ ಹೋಗಲಿ? ದೀರ್ಘವಾಗಿ ಯೋಚಿಸಿರಿ. ಮನೆಯೊಳಗೇನಾದರೂ ಗುಸುಗುಸು ಸುದ್ದಿಯಾದರೆ ನನ್ನ ಗತಿಯೇನು? ಗಂಗಾದೇವಿಯ ಹೊರತು ನನ್ನನ್ನು ರಕ್ಷಿಸುವವರಾರು? ನನ್ನಲ್ಲಿ ದಯೆಯಿಡಿರಿ. ತಮ್ಮ ಜೀವನವನ್ನೂ ಕಲಂಕಿತವಾಗಿಸದಿರಿ."

"ಅಗತ್ಯ ಬಿದ್ದರೆ ನನ್ನ ಪ್ರಾಣದ್ದೇ ಒತ್ತೆಯಿದೆ. ಎಂದು ಬೇಕೋ ಅಂದು ಪರೀಕ್ಷಿಸುವುದಾದರೂ ನನ್ನ ಅಡ್ಡಿಯಿಲ್ಲ."

"ಇದೆಲ್ಲಾ ಮೇಲ್ಮಾತೆಂದು ನನಗೆ ಗೊತ್ತಿದೆ. ಇಂಥ ಒಂದೆರಡು ಘಟನೆಗಳನ್ನೂ ನೋಡಿರುವೆ. ಅದರ ಅಂತಿಮ ಪರಿಣಾಮವೂ ನನಗೆ ಗೊತ್ತಿದೆ. ನನ್ನ ರೂಪವು ನಿಮ್ಮನ್ನೇಕೆ ಸೆಳೆಯಿತೊ? ನನ್ನ ದುರ್ವಿಧಿಯನ್ನೇ ದೂರಬೇಕಷ್ಟೆ. ನಿಮ್ಮ ಇಷ್ಟ ಪೂರ್ತಿಯಾಗಿ ಈ ರಹಸ್ಯವು ಬಯಲಾದ ಮೇಲೆ ನೀವೇನು ಮಾಡುವಿರೆಂದೂ ನನಗೆ ಗೊತ್ತು. ಮಾತುಮಾತಿಗೆ ಭಗವಂತನನ್ನು ತಂದು ನಿಲ್ಲಿಸುವಿರಿ. ಇದರ ಮರ್ಮವೂ ನನಗೆ ಗೊತ್ತು. ಈಶ್ವರನು ಯಾರನ್ನೂ ದುರ್ಮಾರ್ಗದಲ್ಲಿ ಹೋಗೆನ್ನುವುದಿಲ್ಲ. ಇದಕ್ಕೆ ಪ್ರೇಮವೆನ್ನಿರಿ, ವೈರಾಗ್ಯವೆನ್ನಿರಿ ಬೇಕಾದರೆ. ಆದರೆ ಇದು ಕುಪಥವಾಗಿದೆ. ಇಂದೇನೆಲ್ಲ ಆಯಿತೊ, ಅದು ಆಗಲಿ. ಇನ್ನು ಮುಂದೆ ನೀವು ಈ ರೀತಿ ಮಾಡಿದರೆ ನಾನಿಲ್ಲಿ ನಿಲ್ಲಲಾರೆ. ಏನುಮಾಡಲೂ ಶಕ್ಯವಾಗದಿದ್ದರೆ ನೀರಲ್ಲಿ ಮುಳುಗಿ ಸತ್ತೇನು. ಕಟ್ಟಿಗೆಯಿಲ್ಲವಾದರೆ ಬೆಂಕಿಯು ತನಷ್ಟಕ್ಕೇ ನಂದುವುದು. ಇದಕ್ಕೆ ಕಟ್ಟಿಗೆಯೊಡ್ಡಬೇಡಿರಿ." ಎಂದು ದೈನ್ಯದಿಂದ ಪೂರ್ಣೆಯು ಬೇಡಿಕೊಂಡಳು.

"ನನ್ನ ಪ್ರಾಣವುಳಿಯಲಾರದು. ಸತ್ಯ ಹೇಳುವೆ. ನಾನು ವಿಷ ತಿಂದು ಮಲಗುವೆ. ಅಂದರೆ ಹತ್ಯಾಕಾಂಡವು ನಿನ್ನ ಮೇಲಾಗುವುದು." ಕಮಲಾ

ಪ್ರಸಾದನ ಈ ಮಾತುಗಳನ್ನು ಪೂರ್ಣಾ ಕೇಳಿದಳೋ ಇಲ್ಲವೋ ಹೇಳಲಾಗದು. ಬಾಗಿಲು ತೆರೆದು ಹೊರನಡೆದಳು. ಕಮಲಾಪ್ರಸಾದನು ದ್ವಾರದಲ್ಲಿ ನಿಂತು ನೋಡುತ್ತಿದ್ದನು. ಅವಳನ್ನು ತಡೆಯುವ ಧೈರ್ಯವು ಅವನಿಗಾಗಲಿಲ್ಲ. ಪಕ್ಷಿಯು ಒಮ್ಮೆ ಬಲೆಯ ಬಳಿ ಬಂದು, ಮತ್ತೆ ಓಡಿಹೋಯಿತು. ಇಷ್ಟು ಸ್ವಲ್ಪ ಅವಕಾಶದಲ್ಲಿ, ಪೂರ್ಣೆಯ ಮನಸ್ಸು ರೂಪಾಂತರ ಹೊಂದಿತು. ಮೊದಲಿನ ರೋಷ, ಮಧ್ಯದ ವಿಲಾಸ, ಕೊನೆಯ ವೈರಾಗ್ಯ ಇದೊಂದೂ ಅವನಿಗೆ ಅರ್ಥವಾಗಲಿಲ್ಲ. "ಏನು, ಆ ಪಕ್ಷಿಯು ಪುನಃ ತನ್ನ ಬಲೆಯಲ್ಲಿ ಬಿದ್ದೀತೆ?" ಎಂಬ ಪ್ರಶ್ನೆಯೊಂದೇ ಅವನ ತಲೆಯಲ್ಲಿ ಸುಳಿಯುತ್ತಿತ್ತು.

---

## ೧೦

ಆದರ್ಶ ಹಿಂದೂ ಬಾಲಿಕೆಯಂತೆ ಪ್ರೇಮಕುಮಾರಿಯು ಪತಿಗೃಹವನ್ನು ಹೊಕ್ಕು ಪತಿಯನ್ನು ಹೊಂದಿಕೊಂಡಳು. ಅವಳು ಗೃಹಕಾರ್ಯದಲ್ಲಿ ದಕ್ಷಳಾಗಿದ್ದಳು. ಇಡೀ ದಿನ ಏನಾದರೊಂದು ಕಾರ್ಯದಲ್ಲಿ ತೊಡಗಿರುತ್ತಿದ್ದಳು. ದಾನಾನಾಥನಿಗೆ ಸುಂದರ ವಸ್ತುಗಳನ್ನು ಸಂಗ್ರಹಿಸುವ ಚಟವಿದ್ದಿತು. ಆದರೆ ಅವುಗಳನ್ನು ಆಲಂಕಾರಿಕ ರೀತಿಯಲ್ಲಿಡುವುದರಲ್ಲಿ ತೊಡಗುತ್ತಿದ್ದಿಲ್ಲ. ತನ್ನ ಸಾಮುಗ್ರಿಗಳ ಜಾಗ್ರತೆಯೂ ಇದ್ದಿಲ್ಲ. ಕನ್ನಡಕವು ಸ್ನಾನದ ಮನೆಯಲ್ಲಿರುತ್ತಿತ್ತು. ಅದು ಅವನಿಗೆ ನೆನಪಾಗುವುದು ಮತ್ತೆ ಕಾಲೇಜಿನಲ್ಲೇ. ಉಣ್ಣುವುದರಲ್ಲಿ, ತಿನ್ನುವುದರಲ್ಲಿ, ಮಲಗುವುದರಲ್ಲಿ, ಏಳುವುದರಲ್ಲಿ ಎಲ್ಲಿ ಏನೂ ನಿಯಮವಿದ್ದಿಲ್ಲ. ಏನಾದರೊಂದು ಒಳ್ಳೆಯ ಪುಸ್ತಕ ದೊರೆತರೆ ಇಡೀ ರಾತ್ರಿ ಅದನ್ನು ಓದುವುದರಲ್ಲೇ ಕಳೆಯುತ್ತಿದ್ದನು. ಏನೂ ಕೆಲಸವಿಲ್ಲದ ದಿನ ಯಾವಾಗಲೂ ನಿದ್ದೆ. ಖರ್ಚು ಮಾಡುವುದರಲ್ಲಿಯೂ ಅಂತೆಯೇ; ಲೆಕ್ಕ–ಪಕ್ಕ ಒಂದೂ ಇದ್ದಿಲ್ಲ. ಕೈಯಲ್ಲಿ ಕಾಸಿದ್ದರೆ ಬೇಕಾದ್ದು ಬೇಡದ್ದು ಎಲ್ಲ ವಸ್ತುಗಳೂ ಮನೆಗೆ ಬರುತ್ತಿದ್ದುವು. ಅವನು ಮನಸ್ಸು ಮಾಡುತ್ತಿದ್ದರೆ ಇಷ್ಟರೊಳಗೆ ಸ್ವಲ್ಪ ಹಣವನ್ನಾದರೂ ಸಂಗ್ರಹಿಸಿಡಬಹುದಿತ್ತು. ಮಗನ ಈ ರೀತಿಯು ತಾಯಿಗಾಗುತ್ತಿದ್ದಿಲ್ಲ. ಅವನು ಉತ್ಪತ್ತಿಯನ್ನು ತನ್ನ ಕೈಯಲ್ಲಿ ಕೊಡಬೇಕು, ತಾನು ಅವನಿಗೆ ಕೊಡಬೇಕು ಎಂಬುದು ಅವಳ ಆಶೆ. ಅವಳ ಆಶೆಯೂ ಸರಿಯೇ! ಅವಳ ಕಾಲದಲ್ಲಿ

ಅವಳೇನೂ ಹೆಚ್ಚಿನ ಹಣ ಕಂಡವಳಲ್ಲ. ಅವಳ ಪತಿಯು ಒಂದು ಸಾಮಾನ್ಯ ಕೆಲಸದಲ್ಲಿದ್ದವನು.

ಪ್ರೇಮಕುಮಾರಿಯು ಬಂದ ಒಂದೆರಡು ತಿಂಗಳುಗಳಲ್ಲಿಯೇ ಇಡೆಲ್ಲವೂ ಸರಿಯಾಯಿತು. ಪ್ರತಿಯೊಂದು ಕೆಲಸವೂ ಒಂದು ಶಿಸ್ತಿನಿಂದ ನಡೆಯುತ್ತಿತ್ತು. ಪ್ರತಿಯೊಂದು ವಸ್ತುವೂ ಅದರದರ ಸ್ಥಾನದಲ್ಲೇ ಇರುತ್ತಿತ್ತು. ಆದಾಯವೆಚ್ಚಕ್ಕೆ ಲೆಕ್ಕವಿತ್ತು. ದಾನಾನಾಥನಿಗೆ ಅವನ ಸ್ವಂತ ಖರ್ಚಿಗೆ ತಿಂಗಳಿಗೆ ೨೫ ರೂಪಾಯಿಗಳನ್ನು ಕೊಟ್ಟು ಉಳಿದುದನ್ನು ತನ್ನ ಅತ್ತೆಯ ಕೈಯಲ್ಲಿ ಪ್ರೇಮಾ ಕೊಡುತ್ತಿದ್ದಳು. ಇದರಿಂದ ಅತ್ತೆಯ ಆಶೆಯೂ ಪೂರ್ತಿಯಾಯಿತು; ಸೊಸೆಯೂ ಪ್ರಿಯವಾದಳು. ದಾನಾನಾಥನೀಗ ಹತ್ತು ಗಂಟೆಗೆ ಮಲಗಿ, ಐದು ಗಂಟೆಗೆ ಏಳಬೇಕು. ಅಂತೂ ಪ್ರೇಮಾ ಎಲ್ಲರ ಮನಸ್ಸನ್ನೂ ಸೂರೆಗೊಂಡಿದ್ದಳು.

ಇದೆಲ್ಲಾ ಸರಿ. ಆದರೆ ದಾನಾನಾಥನಿಗೆ ಪ್ರೇಮಕುಮಾರಿಯ ಮೇಲೆ ಒಂದು ಸಂಶಯವಿತ್ತು. ಅಮೃತರಾಯನೊಡನೆ ಅವಳಿಗೆ ಪ್ರೇಮವಿದೆಯೆ? ದಾನಾನಾಥನಿಗಾಗಿ ಪ್ರೇಮಾ ತನ್ನ ಪ್ರಾಣವನ್ನೇ ತೆಗೆದುಕೊಟ್ಟರೂ, ಈ ಶಂಕೆಯು ನಿವೃತ್ತಿಯಾಗುವಂತಿಲ್ಲ. ಅವಳ ಪ್ರೇಮಕಥೆಯನ್ನು ಮೊದಲಿನಿಂದಲೇ ತಿಳಿಯದಿರುತ್ತಿದ್ದರೆ, ತನ್ನಷ್ಟು ಸುಖಿಗಳು ಈ ಪ್ರಪಂಚದಲ್ಲಿ ಮತ್ತಾರೂ ಇರಲಾರರು ಎಂದು ತಿಳಿಯುತ್ತಿದ್ದ. ವೇತನದಿಂದಲ್ಲದೆ, ಸಮಾಚಾರಪತ್ರಗಳಿಗೆ ಲೇಖನ ಬರೆದೋ, ಪರೀಕ್ಷಾಪತ್ರಗಳನ್ನು ತಿದ್ದಿಯೋ ಅವನು ಬೇರೆ ಹಣವನ್ನೂ ಗಳಿಸುತ್ತಿದ್ದ. ಇದರಿಂದೆಲ್ಲಾ ಪ್ರೇಮಕುಮಾರಿಗೆ ಏನಾದರೊಂದು ಬಹುಮಾನ ಕೊಡುತ್ತಿದ್ದ. ಅವನಿಗೆ ಸಾಧ್ಯವಿದ್ದರೆ ಆಕಾಶದ ತಾರೆಗಳನ್ನೆಲ್ಲಾ ತಂದು, ಹಾರವಾಗಿ ಪೋಣಿಸಿ, ಅವಳಿಗೆ ತೊಡಿಸುತ್ತಿದ್ದ. ತನ್ನ ಸಹೋದ್ಯೋಗಿಗಳೊಂದಿಗೆ ಅವಳನ್ನು ಹೊಗಳುತ್ತಿದ್ದ. ಅವಳನ್ನು ಮದುವೆಯಾದ ಬಳಿಕ ಅವನ ಗದ್ಯವೇ ಕಾವ್ಯಮಯವಾಗಿತ್ತು. ಅವಳ ಹಾವಭಾವಗಳು ಅವನನ್ನು ಕವಿಯಾಗುವಂತೆ ಪ್ರೇರಿಸುತ್ತಿದ್ದುವು. ಅವಳ ಮುಂದೆ ಕುಳಿತಿದ್ದರೆ ಅವನಿಗೆ ಪ್ರಪಂಚದ ಕಲ್ಪನೆಯೇ ಇರುತ್ತಿದ್ದಿಲ್ಲ. ವಾಯುಮಂಡಲವು ಸ್ವರ್ಗವಾಗುತ್ತಿತ್ತು. ಇಂತಹ ಕೋಮಲತೆ, ಇಂತಹ ತೇಜಸ್ವಿತೆ, ಇಂತಹ ಆಕರ್ಷಣೆ, ಇಂತಹ ಮಾಧುರ್ಯ ಅಜೇಯ. ಲಜ್ಜೆಯಿಂದ ತುಂಬಿದ ನೀಳವಾದ ಕಣ್ಣುಗಳಿಂದ ಅವಳು ಅವನನ್ನು ನೋಡುವಾಗ ತನ್ನನ್ನು ತಾನೇ ಮರೆಯುತ್ತಿದ್ದ. ನಿಜವಾದ ಪ್ರೇಮಸಂಯೋಗದಲ್ಲಿ ಅವನಿದ್ದರೂ, ಒಮ್ಮೊಮ್ಮೆ ಅವನು ವಿಯೋಗದುಃಖವನ್ನನುಭವಿಸುತ್ತಿದ್ದನು.

ಪ್ರೇಮಕುಮಾರಿಯು ತನ್ನಿಂದೆಷ್ಟೋ ದೂರದಲ್ಲಿರುವಳೆಂದು ಭಾವಿಸುತ್ತಿದ್ದನು. ಕಡೆಗೆ ಅವನ ಈ ಮನೋಭಾವನೆಯು ಅಮೃತರಾಯನಲ್ಲಿ ದ್ವೇಷವಾಗಿ ಪರಿಣಮಿಸಿತು. ಅವನ ಆನಂದಸಂಗೀತದಲ್ಲಿ ಇದೊಂದು ಅಪಸ್ವರವಾಗಿತ್ತು. ಇದೊಂದಲ್ಲವಾದರೆ ಅವನ ಜೀವನವು ದೇವತೆಗಳಿಗೂ ಮತ್ಸರವನ್ನುಂಟು ಮಾಡುತ್ತಿತ್ತು. ಈಗಲೂ ಅವನು ಅಮೃತರಾಯನಲ್ಲಿಗೆ ಹೋಗುತ್ತಿದ್ದ. ಮೊದಲಿನಂತೆಯೇ ಹರಟೆಯಾಡುತ್ತಿದ್ದ. ಆದರೆ ಮೊದಲಿನ ಆ ಅಭಿನ್ನತೆ ಯಿದ್ದಿಲ್ಲ. ಈಗ ಅವರು ಒಂದು ಜೀವ, ಎರಡು ದೇಹವಾಗಿದ್ದಿಲ್ಲ. ಅಮೃತರಾಯನಿಗೂ ಇದು ತಿಳಿದಿತ್ತು. ಪ್ರೇಮಕುಮಾರಿಯು ಸುಖವಾಗಿರುವಳೇ ಎಂದು ತಿಳಿಯಲು ಅವನು ಬಹಳ ಆಶಿಸುತ್ತಿದ್ದ. ಒಮ್ಮೆ ದಾನಾನಾಥನೊಡನೆ ಮಾತನಾಡಿ, ಅವನ ಮನಸ್ಸಿನ ಕೊಳೆಯನ್ನು ತೊಳೆಯಬೇಕೆಂದು ಯೋಚಿಸಿದ. ಆದರೆ ಈ ವಿಷಯವನ್ನು ಗ್ರಹಿಸಿಕೊಳ್ಳುವಾಗ ಅವನಿಗೆ ಸಂಕೋಚ ಮಾತ್ರವಲ್ಲ, ಭಯವೂ ಉಂಟಾಗುತ್ತಿತ್ತು. ದಾನಾನಾಥನಿಂಥ ಕ್ಷುದ್ರ ಹೃದಯುದವನೆಂದು ಅವನು ತಿಳಿದಿದ್ದಿಲ್ಲ.

ಕೊನೆಗೊಂದು ದಿನ ಈ ಪ್ರಸ್ತಾಪವನ್ನೆತ್ತಿದ; "ಈಗ ನೀನು ಕನ್ನಡಿಯಲ್ಲಿ ನೋಡಿಕೊಳ್ಳುವುದಿಲ್ಲವೆ?"

ದಾನಾನಾಥನಿಗೆ ಪ್ರಶ್ನೆಯ ಆಶಯವು ತಿಳಿಯಲಿಲ್ಲ. "ದಿನಕ್ಕೆ ನಾಲ್ಕು ಬಾರಿಯಾದರೂ ನೋಡುವೆನು" ಎಂದನು.

"ಏನಾದರೂ ವ್ಯತ್ಯಾಸವಿದೆಯೇ?"

"ಬಡಕಲಾಗುತ್ತಿರುವೆನು."

"ಸುಳ್ಳಾಡಬೇಡ."

"ಪ್ರೇಮಾ ಹೀಗೆ ಹೇಳುವಳು. ಅವಳು ಹೇಳುವುದು ಸರಿಯೆಂದೇ ನನಗನಿಸುತ್ತದೆ. ಮೊದಲು ಒಬ್ಬನಾಗಿದ್ದೆ, ಈಗ ಗೃಹಸ್ಥನಾಗಿರುವೆ. ಸೊರಗುವುದು ಸರಿಯಲ್ಲವೆ?"

ಅಮೃತರಾಯನಿಗೆ ನಗೆ ತಡೆಯಲಿಲ್ಲ. ದಾನಾನಾಥನು 'ಈತನು ತನ್ನನ್ನು ಚಾಳಿಸುವನೆ'ಂದು ತಿಳಿದುಕೊಂಡನು. ತಾನು ಬಲವಂತನಾದರೂ ಅಬಲನಾದರೂ ಇವನಿಗೇನು? ಎಂದು ಯೋಚಿಸಲಾರಂಭಿಸಿದನು. ಕಲುಷಿತ ಪಾತ್ರದಲ್ಲಿ ನಿರ್ಮಲ ಜಲವೂ ದೂಷಿತವಾಗುತ್ತದೆ. ದ್ವೇಷಪೂರ್ಣ ಹೃದಯವು ಪವಿತ್ರವಿನೋದವನ್ನು ಸಹಿಸುವುದೇ? ಈಗ ಇವನು ಅಮೃತರಾಯನೆದುರಿಗೆ ಮೊದಲಿನ ದಾನಾನಾಥನೇ ಆಗಿದ್ದಿಲ್ಲ.

ದಾನಾನಾಥನು ಸ್ವಲ್ಪ ಸಿಡುಕಿನಿಂದ "ನಗುವುದೇಕೆ? ನಗುವ ಮಾತೇ ನಾದರೂ ಬಂತೇ?" ಎಂದನು.

"ನಾನು ನಿನಗಾಗಿ ನಗಲಿಲ್ಲ. ನೀನು, ನಿನ್ನ ಕಣ್ಣು ಮತ್ತು ಬುದ್ಧಿ ಯಿಂದ ಕೆಲಸ ಮಾಡುವುದಿಲ್ಲವೆಂಬುದಕ್ಕೆ ನಕ್ಕೆನು. ಈ ರೀತಿ ನೀನು ದುರ್ಬಲನಾದರೆ ಹೇಗಾಗುವುದು? ಡಾಕ್ಟರನೊಡನೆಯಾದರೂ ಪರೀಕ್ಷೆ ಮಾಡಿಸಬಾರದೆ? ಹವೆ ಬದಲಾಯಿಸುವುದಕ್ಕೆ ಬೆಟ್ಟದ ತುದಿಗೆ ಹೋಗ ಬೇಕಾದರೆ, ಹೋಗೋಣ. ನಾನೂ ಬರುವೆನು." ಎಂದು ಸಮಾಧಾನ ವಾಗಿಯೇ ಅಮೃತ ನುಡಿದ.

"ಹಾಗೆ ಹೋಗಬೇಕಾದರೆ, ಹಣದ ಅಗತ್ಯವಿಲ್ಲವೆ? ನನ್ನಲ್ಲಿ ಕಾಸು ಕೂಡ ದುರ್ಲಭ."

"ಹಣ ಬೇಕಾದರೆ ನಾನು ಕೊಡುವೆನು. ನೀನು ನಿಶ್ಚಯಿಸುವುದೇ ತಡ."

"ನೀನು ಕೊಡುವುದೆಲ್ಲಿಂದ? ನಿನ್ನಲ್ಲಿ ಕಲ್ಲಿನ ತುಂಡುಗಳಲ್ಲದೆ ಮತ್ತೇನಿದೆ?"

"ಬೆಟ್ಟಕ್ಕೆ ಅನೇಕ ಶ್ರೀಮಂತರು ಬರುವರು. ಅವರಿಂದ ಸಂಗ್ರಹಿಸಿ ಕೊಟ್ಟರಾಗದೆ?"

"ಒಳ್ಳೆಯ ಮಾತಿದು. ನಿನ್ನದನ್ನೆಲ್ಲಾ ಮುಗಿಸಿ ಬೇರೆಯವರೊಡನೆ ಯಾಚಿಸುವುದೆ?"

"ನಿನಗೆ ಅಪ್ಪ ತಿನ್ನಬೇಕಾದುದೇ? ಅಥವಾ ಕಾವಲಿಯ ಗುಳಿ ನೋಡ ಬೇಕಾದುದೇ? ನಾನು ಯಾವ ರೀತಿಯಿಂದ ಹಣ ಕೂಡಿಸಿದರೆ ನಿನಗೇನು?"

"ನನ್ನನ್ನು ಕ್ಷಮಿಸು. ನೀನೇ ಪ್ರಯಾಣ ಮಾಡು. ನೀನು ವ್ಯರ್ಥ ವಾಗಿ ಇಷ್ಟು ಹಣ ವ್ಯಯಿಸಿದೆ. ಒಂದು ನೂರು ಜನ ಅನಾಥರಿಗೆ ನೀನು ಆಶ್ರಯವನ್ನಿತ್ತೆ, ಅಂದರೆ ಅದು ಬಹಳ ದೊಡ್ಡ ಉಪಕಾರವಾಯಿತೆ? ಮತ್ತೇ ನಿಲ್ಲ, ನಿನ್ನ ಮುಂದಾಳುವಾಗಬೇಕೆಂಬ ಆಶೆಯು ಪೂರ್ತಿಯಾದೀತು." ಇಷ್ಟು ಹೇಳುತ್ತಾ ದಾನಾನಾಥನು ಎದ್ದು ನಿಂತನು.

ದಾನಾನಾಥನಿಗೆ 'ಉಪಕಾರ' ಎಂಬುದರಲ್ಲಿ ಬಹು ತಿರಸ್ಕಾರ. 'ಸೇವೆ' ಎಂಬ ಶಬ್ದದಲ್ಲೂ ಅಷ್ಟೇ. ಅವನ ದೃಷ್ಟಿಯಲ್ಲಿ ಈಯೆರಡು ಶಬ್ದಗಳ ಹಿಂದೆ ಅಹಂಕಾರ ಮತ್ತು ಖ್ಯಾತಿ ಅಡಗಿತ್ತು. ಅಮೃತರಾಯನೇನೂ ಮರುಮಾತಾಡಲಿಲ್ಲ. ದಾನಾನಾಥನಿಗೆ ಉತ್ತರದ ಆವಶ್ಯಕತೆಯೂ ಇದ್ದಿಲ್ಲ. ಅವನಿಗೆ ಮನೆಗೆ ಹೋಗಬೇಕೆಂಬುದೇ ಆತುರ.

ಮಾಘದ ರಾತ್ರಿಯು ಕೃಷ್ಣಪಕ್ಷ. ಅಲ್ಲದೆ ಸ್ವಲ್ಪ ಮೋಡವೂ ಕವಿದಿತ್ತು. ಬೀದಿಯಲ್ಲಿ ದೀಪಗಳು ಉರಿಯುತ್ತಿದ್ದುವು. ಈ ಸಮಯದಲ್ಲಿ ದಾನಾನಾಥನಿಗೆ ಸೈಕಲ್ ಸವಾರಿ ಮಾಡುವುದು ಕಷ್ಟವೆಂದು ಕಂಡಿತು. ಮಾರ್ಗದಲ್ಲಿ ಮೋಟರುಗಳೂ, ಗಾಡಿಗಳೂ, ಓಡಾಡುತ್ತಿದ್ದುವು. ಅವನಿಗೂ ಪ್ರಾಣದಾಶೆಯಿಲ್ಲವೆ? ನಡೆದುಕೊಂಡೇ ಮನೆಗೆ ಹೋದನು. ಮನೆ ಸೇರಿದೊಡನೆಯೇ ಪ್ರೇಮಕುಮಾರಿಯು, "ಬಹಳ ತಡವಾಯಿತು. ಇಷ್ಟು ಹೊತ್ತು ಎಲ್ಲಿ ಹೋಗಿದ್ದಿರಿ? ಬರುವುದಕ್ಕೆ ಇಷ್ಟು ಸಾವಕಾಶವಿದೆಯೆಂದಾದರೆ, ಭೋಜನ ತೀರಿಸಿಯೇ ಹೋಗಬಹುದಿತ್ತಲ್ಲ?" ಎಂದಳು. ದಾನಾನಾಥನು ಗಂಟೆ ನೋಡುತ್ತಾ, "ಈಗ ತಡವಾಯಿತೆ? ಒಂಬತ್ತು ಗಂಟೆಯೂ ಆಗಿಲ್ಲ. ಅಮೃತರಾಯನಲ್ಲಿಗೆ ಹೋಗಿದ್ದೆ. ವಿಚಿತ್ರ ಮನುಷ್ಯ; ಮಾತಾಡುವುದೆಲ್ಲಾ ಅಸಂಬದ್ಧ. ತನ್ನ ಬಳಿಯಿರುವುದನ್ನೆಲ್ಲಾ ಮುಗಿಸಿ, ಇನ್ನು ಚಂದಾ ಕೂಡಿಸುವುದಂತೆ! ಇನ್ನು ಇವನ ಜೀವನವು ವಂತಿಗೆಯನ್ನು ಹೊಂದಿಕೊಂಡಿದೆ" ಎಂದನು.

ಪ್ರೇಮಾ ಇದಕ್ಕೇನೂ ಉತ್ತರವೀಯಲಿಲ್ಲ. ಅವಳು ಮಾತನ್ನೇ ತಿರುಗಿಸಿದಳು. "ಭೋಜನ ತೀರಿಸಬಹುದಲ್ಲ? ಅಡಿಗೆಯವಳು ಯಾವಾಗಿನಿಂದಲೇ ತಡವಾಯಿತೆನ್ನುತ್ತಾಳೆ." ಎಂದಳು.

ದಾನಾನಾಥನಿಗೆ ಅವಳ ಉತ್ತರದಷ್ಟು ಭೋಜನದ ಆತುರವಿದ್ದಿಲ್ಲ. ಇಂದು ಪರೀಕ್ಷಿಸಬೇಕೆಂದು ಅವನಿಗೆ ಮನಸ್ಸಾಗಿತ್ತು. 'ಓವರ್ ಕೋಟಿ'ನ ಗುಂಡಿಯನ್ನು ತೆಗೆಯುವ ನೆವನ ಮಾಡುತ್ತಾ ಮುಂದುವರಿಸಿದನು. "ನನಗೆಲ್ಲಿಯಾದರೂ ಇಂತಹ ಗತಿಯು ಬಂದರೆ ಜೀವವಿಟ್ಟುಕೊಳ್ಳಲಾರೆ. ಕಾಲೇಜಿಗಾಗಿ ಒಂದೆರಡು ಬಾರಿ ಬೇರೆಯವರೊಂದಿಗೆ ವಂತಿಗೆಗೆ ಹೋಗಿ ನನಗೆ ಅನುಭವವಿದೆ. ಎಷ್ಟೋ ಸಮಯದ ವರೆಗೆ ಅವರನ್ನು ಹೊಗಳಬೇಕು. ಆದರೂ ನಮ್ಮನ್ನು ನಾಯಿಗಳಂತೆ ಕಾಣುತ್ತಾರೆ ಅವರು. ತನ್ನಲ್ಲಿ ಹಣವಿಲ್ಲವಾದರೆ ಯಾವ ಕೆಲಸಕ್ಕೂ ಇಳಿಯಬಾರದು. ಆದರೆ ಹೆಸರು ಗಳಿಸುವ ಇಚ್ಛೆಯೊಂದಿದೆಯಲ್ಲ? ಸಭೆಗಳಿಗೆಲ್ಲಾ ತನ್ನನ್ನು ಕರೆಯಬೇಕು, ಮೆರವಣಿಗೆ ಮಾಡಿಸಿಕೊಳ್ಳಬೇಕು, ಪುಷ್ಪಹಾರಗಳನ್ನೊಪ್ಪಿಸಿಕೊಳ್ಳಬೇಕು; ಎಂದು! ಒಟ್ಟಾರೆ ಹೇಳುವುದಾದರೆ, ಹತ್ತಿಪ್ಪತ್ತು ವಿಧವೆಯರನ್ನು ಕೂಡಿಸಿ, ಇದೊಂದು ರಾಸಲೀಲೆ. ಅದರೊಳಗೆ ಏನೆಲ್ಲಾ ಆಗುವುದೆಂದು ಯಾರಿಗೆ ಗೊತ್ತು?"

ದಾನಾನಾಥನು ಮನಸ್ಸಿನಲ್ಲಿ ಅಮೃತರಾಯನನ್ನು ಇಷ್ಟು ನೀಚನೆಂದು ತಿಳಿಯುವುದಿಲ್ಲ. ಆದರೆ ಪ್ರೇಮಕುಮಾರಿಯ ಪರೀಕ್ಷೆಗಾಗಿ ಮಾತ್ರ

ಹೇಳಿದನಷ್ಟೆ. ಪ್ರೇಮಾ ಸಂಕಟದಲ್ಲಿ ಬಿದ್ದಳು. ಅಮೃತರಾಯನ ಈ ನಿಂದೆಯು ಅಸಹ್ಯವಾಗಿತ್ತು; ಅವಳಿಗೆ ಅವನ ಮೇಲೆ ಈಗಲೂ ಶ್ರದ್ಧೆಯಿತ್ತು. ದಾನಾನಾಥನ ವಿಚಾರವು ಇಷ್ಟು ಕುತ್ಸಿತವಾಗಿರಬಹುದೆಂದು ಅವಳು ತಿಳಿದಿರಲಿಲ್ಲ. ತಿರಸ್ಕಾರಪೂರ್ಣ ನೇತ್ರಗಳಿಂದ ಆತನನ್ನು ನೋಡುತ್ತಾ "ಅಮೃತರಾಯನ ಮೇಲೆ ಇದೇಕಿಷ್ಟು ಅನ್ಯಾಯ ಹೊರಿಸುತ್ತಿರುವಿರಿ? ಅವನ ಹೃದಯವು ವಿಶುದ್ಧವಾಗಿದೆಯೆಂದು ನನಗೆ ಲೇಶವೂ ಸಂದೇಹವಿಲ್ಲ. ಅವನ ಕಾರ್ಯಗಳು ಸಮಾಜಕ್ಕೆ ಉಪಕಾರಿಗಳೊ, ಹಾನಿಕಾರಕಗಳೊ, ಅದನ್ನು ನಾನು ಹೇಳಲಾರೆ. ಆದರೆ ಅವನ ಮೇಲೆ ಇಂತಹ ನೀಚವಾಕ್ಯಗಳನ್ನಾಡಿ ನಿಮ್ಮ ಹೃದಯದ ಆಶಯವನ್ನು ತೋರಿಸುತ್ತಿರುವಿರಿ" ಎಂದಳು.

ದಾನಾನಾಥನು ಅವಾಕ್ಕಾದನು. ಅವನ ಮನಸ್ಸು, "ಅದೇ ಮಾತು ಹೊರಟಿತಲ್ಲ! ನಾನು ಮೊದಲೇ ಹೇಳುತ್ತಿದ್ದುದೇನು?" ಎಂದಿತು. "ಪ್ರೇಮಕುಮಾರಿಗೆ ಅಮೃತರಾಯನಲ್ಲಿ ಯಾವ ಸಂಬಂಧವೂ ಇಲ್ಲವಾದರೆ– ಇವಳ ಬದಲು ಬೇರೊಬ್ಬಳಾಗಿದ್ದರೆ– ಇಂತಹ ತೀಕ್ಷ್ಣವಚನಗಳಿಂದ ಅವನ ಪಕ್ಷ ವಹಿಸಿ ವಾದಿಸುತ್ತಿದ್ದಳೆ? ತನ್ನ ಮಾತುಗಳು ಇವಳಿಗೆ ನಾಟಿತೆಂದು ಕಾಣುವುದು. ಇಲ್ಲವಾದರೆ ಕಣ್ಣುಗಳಲ್ಲಿ ಕಿಡಿಗಳೇಕೆ? ಇಷ್ಟಿಷ್ಟು ಕಠಿನ ಶಬ್ದಗಳಿಂದ ವಿರೋಧಿಸಬೇಕೇಕೆ? ಒಂದು ವೇಳೆ ವಿರೋಧಿಸಬೇಕಾದರೂ ಕೋಮಲ ಶಬ್ದಗಳಿದ್ದಿಲ್ಲವೆ? ಇನ್ನೂ ನೋಡೋಣ." ಎಂದಂದುಕೊಂಡು;

"ನೀನು ಅಮೃತರಾಯನನ್ನು ದೇವರೆಂದು ತಿಳಿಯುವೆಯೆಂದು ನನಗೆ ಗೊತ್ತಿದ್ದಿಲ್ಲ. ದೇವತ್ವದಿಂದ ಅವನು ಮೆಲ್ಲನೆ ಜಾರುತ್ತಿದ್ದಾನೆ." ಎಂದನು.

ಪ್ರೇಮಕುಮಾರಿಯು ನಮ್ರತೆಯಿಂದಲೇ ಉತ್ತರವಿತ್ತಳು; "ನಾನು ಅವನನ್ನು ದೇವರೆಂದು ತಿಳಿದಿಲ್ಲ. ಆದರೆ ಪಶುವೆಂದೂ ತಿಳಿಯುವುದಿಲ್ಲ. ಒಂದು ವೇಳೆ ಅವನನ್ನು ದುಷ್ಟವಾಸನೆಗಳು ಸೋಲಿಸಿದ್ದುವಾದರೆ ವಿವಾಹ ಮಾಡಿಕೊಳ್ಳುತ್ತಿದ್ದಿಲ್ಲವೆ?"

"ಆದರೆ ಅವನು ಹಾಗೆ ಮಾಡಿದಲ್ಲಿ ಮುಂದಾಳುವಾಗುವನೆ? ತನ್ನ ತ್ಯಾಗದ ಮುದ್ರೆಯನ್ನು ಜನತೆಯ ಮೇಲೊತ್ತಲಾಗುವುದೆ?"

"ದಯಮಾಡಿ ಈ ಮಾತನ್ನು ನಿಲ್ಲಿಸಿರಿ. ಇಂತಹ ಮಾತುಗಳನ್ನು ನಾನು ಕೇಳಲಾರೆ. ಒಂದು ವೇಳೆ ಅವನು ತನ್ನ ನಿಯಮದಿಂದ ಜಾರಿರುವನಾದರೂ, ದಾರಿತಪ್ಪಿ ಕಾಡುದಾರಿ ಹಿಡಿದಿರುವನಾದಗೂ, ತಾವು ಈ ಮಾತುಗಳನ್ನು ಹೇಳಬಾರದು. ತನ್ನ ಸರ್ವಸ್ವವನ್ನೂ ಧಾರೆಯೆರೆದವನಿಗೆ ವಂತಿಗೆ ಕೂಡಿಸುವುದು ಕಷ್ಟವಾದೀತೆ? ಜನರು ಸಂತೋಷದಿಂದ ಅವನಿಗೆ ದಾನ

ಮಾಡಿಯಾರು. ಅವನ ಮೇಲೆ ಎಲ್ಲರಿಗೂ ವಿಶ್ವಾಸವಿದೆ. ಯಾರ ಮೇಲೆ ಜನರಿಗೆ ಸಂಶಯವಿದೆಯೋ ಅವರಿಗೆ ಮಾತ್ರ ವಂತಿಗೆ ಸಿಗುವುದಿಲ್ಲ."

ಇಷ್ಟರಲ್ಲಿ ದಾನಾನಾಥನ ವೃದ್ಧಮಾತೆಯು ಬಂದಳು. "ಏನಮ್ಮ?" ಎಂದು ದಾನಾನಾಥನು ಕೇಳಿದನು.

"ನಿಮ್ಮೊಳಗೇನು ಜಗಳ?" ಎಂದು ಕೇಳಿದಳಾಕೆ.

"ಇವಳೇ ನನ್ನೊಡನೆ ಜಗಳಕ್ಕೆ ನಿಂತುದಮ್ಮ." ಎಂದು ಮಗನೆಂದನು.

"ನೀವೇ ಹೇಳಿ ಅತ್ತೆ, ಗಟ್ಟಿ ಮಾತಾಡುತ್ತಿದ್ದುದು ಇವರೆ, ನಾನೆ?"

"ಗಟ್ಟಿ ಮಾತಾಡುತ್ತಿದ್ದುದು ನೀನೇ! ಇವನು ಕುಳಿತೇ ಇದ್ದ."

"ಸರಿಯಾಗಿ ಹೇಳಿದಿರಿ ಅತ್ತೆ. ಅವರವರ ಮಕ್ಕಳನ್ನು ಯಾರಾದರೂ ದೂರಿಯಾರೆ?" ಎಂದು ಅತ್ತೆಯಮಾತಿಗೆ ನಗುತ್ತಲೇ ಉತ್ತರವಿತ್ತಳು ಪ್ರೇಮಾ.

"ಅಮ್ಮಾ . . . ."

"ನಿನಗೆ ಹಸಿವಾಗಿಲ್ಲವೇನು? ಮೊದಲು ಉಂಡು, ಆ ಮೇಲೆ ಜಗಳ ಮಾಡಿರಿ. ನನ್ನಿಂದ ಇಷ್ಟು ಹೊತ್ತಿನ ವರೆಗೂ ಊಟಮಾಡದಿರಲಿಕ್ಕಾಗುವುದಿಲ್ಲ." ಎಂದಳು ತಾಯಿ ಮಗನೊಡನೆ.

"ಇನ್ನೂ ನೀನು ಉಂಡಿಲ್ಲವೆ, ಅಮ್ಮಾ? ನಾನು ದಿನದಲ್ಲಿ ಹತ್ತುಬಾರಿ ತಿನ್ನುತ್ತೇನೆ. ನನ್ನನ್ನೇಕೆ ಕಾಯುವೆ. ನಾನು ಬಹಳ ಬೆಳೆದಿರುವೆನೆಂದು ಅಮೃತರಾಯ ಕೂಡ ಹೇಳಿದ. ಹಾಗಾಗಿ ಒಂದು ದಿನ ಉಣ್ಣದಿದ್ದರೂ ಚಿಂತೆಯಿಲ್ಲ." ಎಂದು ನಗುತ್ತಾ ದಾನಾನಾಥನೆಂದ.

"ಅಮೃತರಾಯನು ನಿನ್ನನ್ನು 'ಬೆಳೆದಿರುವೆ'ಯೆಂದನೇ? ತಮಾಷೆಯಾಗಿರಬೇಕು."

"ಅಲ್ಲಮ್ಮ. ನಿಜವಾಗಿಯೂ ಹೇಳಿದ."

"ಹೇಳುತ್ತಿದ್ದುದು ಅವನ ತಲೆ! ಬೆಳೆದಿರುವೆಯಂತೆ! ಅರ್ಧ ದೇಹ ಕೂಡ ಇಲ್ಲ."

ದಾನಾನಾಥನು ಬೆಳೆದಿದ್ದಿಲ್ಲವಾದರೂ ಲಕ್ಷಣವಂತನಾಗಿದ್ದ. ಮುಖದಲ್ಲಿ ರಕ್ತಛಾಯೆಯು ತುಂಬಿತ್ತು. ಆದರೆ ಇದು ಹೇಳುವ ಮಾತಲ್ಲ. ಮಕ್ಕಳು ಎಷ್ಟು ಬೆಳೆದರೂ ತಾಯಿಯರಿಗೆ ಅದೇನೂ ಕಾಣಿಸುವುದಿಲ್ಲ. ಅಂತೂ ಕಡೆಗೆ ಅವರೆಲ್ಲರೂ ಊಟಮಾಡಿದರು. ಊಟದ ಅನಂತರ ದಾನಾನಾಥನೆಷ್ಟೋ ಹೊತ್ತಿನ ವರೆಗೆ ಪ್ರೇಮಕುಮಾರಿಯ ಮಾತನ್ನೇ ಕುರಿತು ಆಲೋಚಿಸುತ್ತಿದ್ದನು. ಅವಳು ಭೋಜನ ತೀರಿಸಿ ಬಂದೊಡನೆಯೇ ಕ್ಷಮಾಯಾಚನೆಯನ್ನು ಮಾಡಿದನು; "ಪ್ರೇಮಾ, ನೀನು ನನ್ನಲ್ಲಿ ಸಿಟ್ಟುಗೊಂಡೆಯೊ?"

"ನಾನು? ನೀವು ನನ್ನನ್ನೇನು ಮಾಡಿದಿರಿ? ನಾನೇ ಅಸಭ್ಯವಾಕ್ಯಗಳ ನ್ನಾಡಿದುದು. ನಾನೇ ನಿಮ್ಮ ಕ್ಷಮಾಯಾಚನೆ ಮಾಡಬೇಕೆಂದಿದ್ದೆ." ಎಂದು ಮುಗುಳುನಗುತ್ತಾ ಹೇಳಿದಳು ಪ್ರೇಮಾ.

ದಾನಾನಾಥನು ವಿನೋದಿಯಾಗಿದ್ದರೂ ಸ್ವಲ್ಪ ದುರಾಗ್ರಹಿಯಾಗಿದ್ದ. ಇಡೀ ಪ್ರಪಂಚವು ಅಮೃತರಾಯನ ಗುಣಗಾನ ಮಾಡುವುದು ಏನೂ ಆಕ್ಷೇಪವಲ್ಲ. ತನ್ನ ಪತ್ನಿ ಮಾತ್ರ ಅವನ ಸುದ್ದಿ ಎತ್ತಬಾರದು. ಇದೆಂತಹ ನ್ಯಾಯ. ಅಮೃತರಾಯನಂತೆ ತಾನೂ ಮಾಡಬೇಕೆಂದು ನಿರ್ಣಯಿಸಿದನು. ಆದರೆ ಮಾತ್ರ ಅವನ ವಿರೋಧಿಯಾಗಿ.

---

## ೧೧

ಈ ರೀತಿ ಮಿತ್ರರ ಮನಸ್ಸುಗಳು ತಿರುಗತೊಡಗಿದುವು. ಯಾರ ಮೈತ್ರಿ ಉಪಮಾನಕ್ಕರ್ಹವಾಗಿತ್ತೋ ಅವರಿಬ್ಬರೂ ಕಾಲಗತಿಯಿಂದ ಪ್ರತಿ ದ್ವಂದಿಗಳ ರೂಪವನ್ನು ತಾಳಿದರು. ಒಂದು ಸಪ್ತಾಹದ ವರೆಗೆ ದಾನಾನಾಥನು ಕಾಲೇಜಿಗೆ ಹೋಗಲಿಲ್ಲ. ಉಣ್ಣಬೇಕೆಂದೂ ಇರಲಿಲ್ಲ. ಇಡೀ ದಿನ ಕೋಣೆಯೊಳಗೆ ಕುಳಿತು ಹಿಂದೂ ಧರ್ಮರಕ್ಷಣೆಯ ಕುರಿತು ಒಂದು ಭಾಷಣವನ್ನು ತಯಾರಿಸಿದನು. ಏಕಾಂತದಲ್ಲಿ ಕನ್ನಡಿಯೆದುರು ಭಾಷಣ ಮಾಡಿದನು. ತನ್ನ ಮಾತಿಗೆ ತಾನೇ ಮಣಿದನು. ಏಳನೆಯ ದಿನ 'ಸನಾತನಧರ್ಮದ ಆಘಾತ' ಎಂಬ ವಿಷಯದ ಮೇಲೆ ನಗರಭವನದಲ್ಲಿ ಶ್ರೀ ದಾನಾನಾಥರು, ಶ್ರೀ ಲಾಲಾ ಬದರೀಪ್ರಸಾದರ ಅಧ್ಯಕ್ಷತೆಯಲ್ಲಿ ಭಾಷಣ ಮಾಡಲಿರುವರು ಎಂದು ಕರಪತ್ರ ಪ್ರಚಾರವಾಯಿತು.

ಪ್ರೇಮಾ ಕೇಳಿದಳು, "ಏನು? ಇಂದು ನಿಮ್ಮ ಭಾಷಣವಿದೆಯೆ? ಈ ವರೆಗೆ ನೀವು ಮಾತಾಡಿದವರಲ್ಲವಲ್ಲ?"

"ಇದು ಪರೀಕ್ಷೆ."

"ನಾನೂ ಬರಲೆ? ನಾನೂ ಕೇಳಬೇಕು, ಹೇಗೆ ಮಾತಾಡುವಿರೆಂದು."

"ಬೇಡ. ನೀನು ಅಲ್ಲಿದ್ದರೆ ನನಗೆ ಮಾತೇ ಬರಲಾರದು. ನಿನ್ನನ್ನು ನೋಡಿಕೊಂಡೇ ನಿಂತುಬಿಟ್ಟೇನು. ನನ್ನ ಮಾತನ್ನು ಕೇಳಿ ಎಷ್ಟೋ ಜನರು ಇಂತಹ ಧರ್ಮರಕ್ಷಕರು ಇನ್ನು ಹುಟ್ಟಲಿಕ್ಕಿಲ್ಲ ಎಂದು ತಿಳಿದಾರು."

"ಲಾಲಾಜಿಯವರು ನಿಮ್ಮನ್ನು ತಮ್ಮ ಪಕ್ಷಕ್ಕೆ ಎಳೆದುಕೊಂಡರು. ಈ ಕರಪತ್ರವನ್ನು ಕಂಡು ಅಮೃತರಾಯನು ಬೇಸರಪಡಲಾರನೇ? ಇಂದಿನ ವರೆಗೆ ಅವನು ನಿಮ್ಮನ್ನು ತನ್ನ ಸಹಾಯಕನೆಂದು ತಿಳಿದಿಲ್ಲವೆ?"

"ನಾನು ಅವನ ಸಹಾಯಕನೆಂದೂ ಆಗಿದ್ದಿಲ್ಲ. ಸುಧಾರಣೆಯ ಗಡಿಬಿಡಿಯಲ್ಲೆಂದೂ ನಾನು ಬಿದ್ದದ್ದಿಲ್ಲ. ನಾನು ಅಂದೂ, ಇಂದೂ, ಸಮಾಜವನ್ನು ಅದರಷ್ಟಕ್ಕೆ ಹೋಗಗೊಡುವವನು. ಅದಕ್ಕೆ ಅದರ ಅಗತ್ಯವು ಗೊತ್ತಿಲ್ಲವೆ? ಬೇಕಾದಂತಹ ಸುಧಾರಣೆಗಳು ಬೇಕಾದ ಸಮಯದಲ್ಲೇ ಆಗುವುದಿಲ್ಲವೆ? ಇನ್ನು ನಾನು ಹೋಗುವೆ. ಇಂದಿನ ಭಾಷಣದಲ್ಲಿ ನನಗೆ ಜಯವುಂಟಾಗುವಂತೆ ದೇವರಲ್ಲಿ ಹರಕೆ ಹೇಳಿಕೊ. ಒಂದೂವರೆ ಮಣ ಲಾಡು ಕೊಡುವೆನೆಂದು ಹೇಳು." ಎನ್ನುತ್ತಾ ದಾನಾನಾಥನು ಹೊರಟನು. ಪ್ರೇಮಾ ನಗುತ್ತಾ ಒಪ್ಪಿಕೊಂಡಳು.

ಭಾಷಣವಾಯಿತು. ಅವನೆಣಿಸಿದ್ದಕ್ಕಿಂತ ಹೆಚ್ಚಿನ ಸಫಲತೆಯೇ ದೊರೆಯಿತು. ಮೊದಲು ಅವನು ಚಡಪಡಿಸಿದನು. ನಿಧಾನವಾಗಿ ಮಾತಿನಲ್ಲಿ ಶಕ್ತಿಸಂಚಾರವಾದೊಡನೆಯೇ ಅವನ ವಾಕ್ಪ್ರವಾಹವು ಮುನ್ನುಗ್ಗತೊಡಗಿತು. ತನ್ನ ಶಬ್ದಮಾಧುರ್ಯಕ್ಕೆ ತಾನೇ ಮೋಹಿಸಿದನು. ಸಂಪೂರ್ಣ ಎರಡು ಗಂಟೆಗಳ ವರೆಗೆ ಸಭೆಯು ಚಿತ್ರಲಿಖಿತವಾದಂತೆ ಕುಳಿತುಕೊಂಡಿತು. ವ್ಯಾಖ್ಯಾನವು ಸಮಾಪ್ತಿಯಾದೊಡನೆಯೇ ಪ್ರತಿಯೊಬ್ಬನೂ ಇಂತಹ ವ್ಯಕ್ತಿಯನ್ನು ಪಡೆದ ನಾವು ಧನ್ಯರೆಂದು ತಿಳಿದರು. ಬೂದಿ ಮುಚ್ಚಿದ್ದ ಕೆಂಡ! ಎಂತಹ ಪಾಂಡಿತ್ಯ! ಎಂತಹ ಪ್ರತಿಭೆ! ಧರ್ಮಗ್ರಂಥಗಳ ಸಾರವೆಲ್ಲ ಹೆಪ್ಪುಗಟ್ಟಿದಂತಿತ್ತು! ವೇದಿಕೆಯಿಂದ ದಾನಾನಾಥನು ಇಳಿದೊಡನೆಯೇ ಸಾವಿರಾರು ಜನರು ಶ್ರದ್ಧಾಪುಷ್ಪಗಳಿಂದ ಅವನನ್ನು ಅಲಂಕರಿಸಿದರು. ಇಂತಹ ಸ್ವರ್ಗೀಯಾನುಭವವು, ಅವನಿಗಂದಿನ ವರೆಗೆ ದೊರೆತಿದ್ದಿಲ್ಲ.

ರಾತ್ರಿ ಎಂಟು ಗಂಟೆಯ ಸಮಯ. ದಾನಾನಾಥನು ಪ್ರೇಮಕುಮಾರಿಯೊಡನೆ ಕುಳಿತು ಮಾತಾಡುತ್ತಿದ್ದ. "ಏನಾದರೂ ಒಂದು ಹತ್ತು ಸಾವಿರ ಜನರಿದ್ದರು! ಎಲ್ಲರೂ ಮೌನವಾಗಿ ಕುಳಿತಿದ್ದರು. ನಾನು ಇದು ವರೆಗೆ ಇಂತಹ ತಲ್ಲೀನತೆಯನ್ನು ಕಂಡಿಲ್ಲ."

ಅಷ್ಟರಲ್ಲೊಂದು ಮೋಟಾರು ಬಂತು. ಅದರಿಂದ ಅಮೃತರಾಯ ಇಳಿದನು. ಅವನ ಪರಿಚಿತಸ್ವರವು ದಾನಾನಾಥನಿಗೆ ಕೇಳಿತು; "ಓಹ್! ಸ್ವಾಮಿಗಳು! ಸ್ವಲ್ಪ ಹೊರಬರುವಿರಾ? ಸ್ವಲ್ಪ ಬೆನ್ನು ಚಪ್ಪರಿಸಲಿದೆ. ಬಹುಮಾನ ಕೊಡಲಿದೆ." ಎನ್ನುತ್ತ ಒಳಬಂದನು.

ದಾನಾನಾಥನು ಆಶ್ಚರ್ಯದಿಂದ "ಅಮೃತರಾಯ! ಅವನೆಲ್ಲಿಂದ ಬಂದ? ವೀಳ್ಯದ ಹರಿವಾಣ ಕಳುಹಿಸು" ಎಂದು ಪ್ರೇಮಕುಮಾರಿಯೊಡನೆ ಹೇಳಿ ತನ್ನ ಕೋಣೆಯಿಂದ ಹೊರಬಂದನು.

ವಿವಾಹಾನಂತರ ದಾನಾನಾಥನ ಮನೆಗೆ ಅಮೃತರಾಯನ ಆಗಮನ ಇದೇ ಮೊದಲನೆಯದು. ಬಾಗಿಲಿಗೇ ದಿಬ್ಬಣ ಬಂದಂತೆ ಗಾಬರಿಯಾಯಿತು ಪ್ರೇಮಕುಮಾರಿಗೆ. ಬಾಯಿಂದ ಮಾತುಗಳೇ ಹೊರಡುತ್ತಿದ್ದಿಲ್ಲ. ತನ್ನ ಮಾತನ್ನೆಲ್ಲಿಯಾದರೂ ಅಮೃತರಾಯನು ಕೇಳದಿರಲಿ ಎಂದು ಭಯವಾಗುತ್ತಿತ್ತು. ಸನ್ನೆಯಿಂದ ಸೇವಕನನ್ನು ಕರೆದು ವೀಳ್ಯದೆಲೆಗಳನ್ನು ತರಿಸಿ, ಬೀಡಾ ತಯಾರಿಸುತ್ತ ಕುಳಿತಳು.

ದಾನಾನಾಥನು ಅಮೃತರಾಯನ ಬಳಿ ಹೋದರೂ ಅವನನ್ನು ನೋಡುವುದಕ್ಕಾಗುತ್ತಿದ್ದಿಲ್ಲ.

ಅಮೃತರಾಯನು ಅವನನ್ನಪ್ಪಿಕೊಳ್ಳುತ್ತಾ "ಇಂದು ನೀನು ನಿನ್ನ ಮಹಿಮೆಯನ್ನು ತೋರಿಸಿದೆ. ನನ್ನ ಜೀವಮಾನದಲ್ಲಿ ಇಂತಹ ಭಾಷಣವನ್ನು ಕೇಳಲಿಲ್ಲ." ಎಂದನು. ದಾನಾನಾಥನು ಅಮೃತರಾಯನ ಈ ಪ್ರಶಂಸೆಯ ಮಾತನ್ನು ಪ್ರೇಮಾ ಕೇಳಲಿಲ್ಲವೆಂದು ಪಶ್ಚಾತ್ತಾಪಪಟ್ಟನು. "ಏನು ತಮಾಷೆಯಿದು?" ಎಂದು ನಾಚುತ್ತಾ ಹೇಳಿದನು.

"ತಮಾಷೆಯಲ್ಲ, ಇಂದ್ರಜಾಲ. ಬೆಂಕಿ ಕೊಟ್ಟುಬಿಟ್ಟೆ. ಇನ್ನು ನಮ್ಮಂತಹರನ್ನು ಕೇಳುವವರಿದ್ದಾರೆಯೆ? ನಿಜ ಹೇಳಬೇಕು; ನಿನಗಿಂತಹ ಶಕ್ತಿಯು ಹೇಗೆ ಬಂತು?"

"ನೀನೆಲ್ಲಿ ಕುಳಿತ್ತಿದ್ದೆ? ನಾನು ನೋಡಲೇ ಇಲ್ಲ?"

"ಎಲ್ಲರ ಹಿಂದಿನ ಸೋಫಾದಲ್ಲಿ!"

"ನಿಜ ಹೇಳಬೇಕು. ನನ್ನಲ್ಲಿ ಮಾತಾಡುವ ಶಕ್ತಿಯಿದೆಯೇ?"

"ಏನು ಹೇಳಬೇಕಿದಕ್ಕೆ? ಮೊದಲ ಮಾತಿನಲ್ಲಿ ನಿನ್ನ ಸ್ಥಾನವನ್ನು ಗಳಿಸಿಕೊಂಡೆ. ನೀನು ಮತ್ತು ನಾನು ಪ್ರತಿಕೂಲ ಮಾರ್ಗದಲ್ಲಿರುವೆವಲ್ಲಾ ಎಂಬುದೇ ನನಗೆ ಚಿಂತೆ. ಇಲ್ಲಿ ಯಾರೂ ಇಲ್ಲ. ನನ್ನಲ್ಲಿ ಸತ್ಯ ಹೇಳಬೇಕು; ನೀನು ಅಂತರ್ಯದಲ್ಲಿ ಕೂಡ ಸುಧಾರಣೆಯಿಂದ ಹಿಂದೂ ಸಮಾಜವು ಅವನತಿಗಿಳಿದೀತೆಂದು ಗ್ರಹಿಸಿರುವೆಯಾ?"

"ನಾನು ಓದಿದ ಧರ್ಮಗ್ರಂಥಗಳಿಂದ ಹಾಗೆ ತಿಳಿದಿರುವೆನು. ಭ್ರಮೆಯಾಗಿರಲೂ ಬಹುದು."

"ಹಾಗಾದರೆ ನನಗೂ ನಿನಗೂ ಭೇದವಿದೆಯೆಂಬುದು ಖಂಡಿತ. ಆದರೆ

ಒಂದು ಮಾತು; ನಮ್ಮ ಸಿದ್ಧಾಂತಗಳಲ್ಲಿ ಭೇದವಿರಬಾರದೇಕೆ? ವೇದಿಕೆಯ ಮೇಲೆ ನಾವು ವೈರಿಗಳಾಗಬಾರದೇಕೆ? ಆದರೂ ನಮ್ಮ ಮೈತ್ರಿಯು ಅಖಂಡ ವಾಗಿರಬೇಕು. ನಮ್ಮ ಸ್ವಂತ ಜೀವನದಲ್ಲಿ ಈ ವಿಷಯ ಎಂದೂ ಬರ ಬಾರದು. ಹೀಗಾಗದೆಂದು ನನಗೆ ವಿಶ್ವಾಸವಿದೆ. ನಿನ್ನ ಮೇಲೆ ಮಾತ್ರ ನನಗೆ ವಿಶ್ವಾಸವಿಲ್ಲ ಕ್ಷಮಿಸಬೇಕು, ನನಗೊಂದೇ ಭಯ; ನೀನು . . . ."

ದಾನಾನಾಥನು ನಡುವೆ ಬಾಯಿಹಾಕಿದನು – "ನಾನು ನಿನಗೆ ಈ ವಿಷಯದಲ್ಲಿ ಮಾತು ಕೊಡುತ್ತೇನೆ. ನಮ್ಮ ವಿಚಾರ ಭೇದಗಳು ಎಂದಿಗೂ ನಮ್ಮ ಮೈತ್ರಿಗೆ ಅಡ್ಡಿಯಾಗವು."

"ನೀನು ಹೇಳಿದರೂ ನನಗೆ ನಂಬುಗೆಯಾಗದು."

"ಇದಕ್ಕೆ ಪ್ರಮಾಣ ಮಾಡಿದರೆ?" ಎಂದನು ದಾನಾನಾಥ.

"ಮತ್ತೆ . . . . ಮನೆಯಲ್ಲೆಲ್ಲರೂ ಕ್ಷೇಮ ತಾನೆ? ನಿನ್ನ ತಾಯಿಯೊಡನೆ ನನ್ನ ಪ್ರಣಾಮುವನ್ನು ತಿಳಿಸಿಬಿಡು. ನಮಸ್ತೇ!" ಎನ್ನುತ್ತ ಹೊರಟನು.

"ತಡೆ, ಇಷ್ಟೇನು ಅವಸರ? ಊಟ ತೀರಿಸಿ ಹೋಗಬಹುದಲ್ಲ?"

"ಎಷ್ಟೋ ಕಡೆ ಹೋಗಲಿದೆ. ವಂತಿಗೆ ಹಣಕ್ಕಾಗಿ ವಿಜ್ಞಾಪನೆ ಮಾಡ ಲಿದೆ. ಆದರೆ ನೀನು ನನ್ನ ಹಾದಿಗೆ ಮುಳ್ಳೊಡ್ಡಿರುವೆ."

ಪ್ರೇಮಕುಮಾರಿಯು ಬೀಡ ತಯಾರಿಸುತ್ತಲೇ ಇದ್ದಳು. ಅಮೃತ ರಾಯ ಹೋಗಿಯೇ ಬಿಟ್ಟ. ದಾನಾನಾಥನು ಬಂದು "ಅರೆ, ನಿನ್ನ ಬೀಡ ವಿನ್ನೂ ಆಗಲಿಲ್ಲ. ಅವನು ಹೋದನಲ್ಲ?" ಎಂದನು.

"ಅವನಿಂದು ಸಭೆಗೆ ಬಂದಿದ್ದನೇ?" ಎಂದು ಪ್ರೇಮಾ ಕೇಳಿದಳು.

"ಹೌದು, ಬಂದಿದ್ದನಂತೆ. ಎದುರಿಗೆ ಬರುತ್ತಿದ್ದರೆ ಅವನಿಗೆ ಮಂಗ ಳಾರತಿಯಾಗುತ್ತಿತ್ತು. ಈಗ ಚಂದಾ ಕೂಡಿಸ ಹೊರಟಿರುವನು. ಇವ ನೆಷ್ಟು ಕೂಡಿಸುವನೆಂದು ನೋಡಬೇಕು. ಈ ಊರಲ್ಲಿ ಒಂದು ಕಾಸೂ ದೊರೆಯಲಾರದು. ವಾತಾವರಣವು ಬದಲಾಗಿಬಿಟ್ಟಿದೆಯೀಗ. ಒಂದು ರೀತಿಯ ಅಹಂಕಾರವು ಅವನ ಸ್ವರದಲ್ಲಿ ಒಡೆದು ಕಾಣುತ್ತಿದ್ದಿತ್ತು" ಎಂದನು.

"ಹಳಬರೊಂದು ವೇಳೆ ವಿರೋಧಿಸಿಯಾರು. ಶಿಕ್ಷಿತರೂ ವಿರೋಧಿಸಿ ಯಾರೇ?" ಎಂದು ಪುನಃ ಪ್ರೇಮಾ ಪ್ರಶ್ನಿಸಿದಳು.

"ನಾನು ಬೇಕಾದರೆ ಶರ್ತ ಕಟ್ಟುವೆ." ಎಂದು ನಿರ್ಧಾರದ ಸ್ವರದಲ್ಲಿ ದಾನಾನಾಥನೆಂದನು.

"ಅವನಿಗೆ ಸಿಗಲಿ ಸಿಗದಿರಲಿ ಜಗಳವು ನಮಗೇಕೆ?" ಎಂದು ಪ್ರೇಮಾ ಮಾತು ಮುಗಿಸಿದಳು.

ಅಷ್ಟರಲ್ಲಿ ಕಮಲಾಪ್ರಸಾದನು ಬಂದನು. ಪ್ರೇಮಕುಮಾರಿಯು ಅವಗುಂಠನವನ್ನು ಮುಂದಕ್ಕೆಳೆದು, ತಲೆತಗ್ಗಿಸಿ ನಿಂತುಕೊಂಡಳು. ಅವನು ದಾನಾನಾಥನೊಡನೆ "ನೀವಿಂದು ವೈರಿಗಳ ಬಾಯಿಗೆ ಬೀಗ ಹಾಕಿದಿರಿ. ನಮ್ಮ ವಿರೋಧಿಗಳೆಲ್ಲರೂ ಪರಿಸ್ಥಿತಿ ಬದಲಾದುದಕ್ಕೆ ತುಂಬ ಗಾಬರಿಯಲ್ಲಿರುವರು. ಇಷ್ಟಕ್ಕೂ ತಮಾಷೆಯೇನೆಂದರೆ ಇನ್ನು ವಂತಿಗೆ ಒಂದು ಪೈ ಕೂಡ ದೊರೆಯದು" ಎಂದನು.

"ಏನಿಲ್ಲೆಂದರೂ ಒಂದಿಪ್ಪತ್ತೈದು ಸಾವಿರವಾದರೂ ಸಿಗಲಾರದೆ?" ಎಂದು ದಾನಾನಾಥನು ಪ್ರಶ್ನಿಸಿದನು.

"ಏನು? ಐದು ಸಾವಿರಕ್ಕಿಂತಲೂ ಹೆಚ್ಚು ಸಿಕ್ಕಿದರೆ ನಾನು ಮೀಸೆ ಬೋಳಿಸಿಯೇನು. ಅವನ ಬಿನ್ನಹಕ್ಕಿಂತಲೂ ಮೊದಲು ಮನೆಮನೆಗೆ ಹೋದೇನು. ತಂದೆಯವರು ನಮ್ಮ ಪಕ್ಷಕ್ಕಿರುವರು. ಅವರ ಸಭೆಯಾಗುವ ದಿನವೇ ನಮ್ಮ ಸಭೆಯೂ ಆಗಬೇಕು."

"ನಿನಗೇನೂ ಗೊತ್ತಿಲ್ಲ. ಅಧಿಕಾರಿ ವರ್ಗವು ಅವರ ಕಡೆಗಿದೆ. ಹಾಕೀಮ ಜಿಲ್ಲೆಯವರು ಸ್ಥಳ ಕೂಡ ಕೊಡಲಿರುವರಂತೆ."

ಕಮಲಾಪ್ರಸಾದನು ಸ್ವಲ್ಪ ಆಲೋಚಿಸಿ – "ಅಧಿಕಾರಿ ವರ್ಗವು ತಿರುಗಿರಲಿ. ಅವರಿಗೂ ನಮ್ಮಲ್ಲಿ ಬಾಣಗಳ ಕೊರತೆಯಿಲ್ಲ. ತಂದೆಯವರೊಡನೆ ಹೇಳಿ ನಾಲ್ಕೈದು ಶ್ರೀಮಂತರನ್ನು ಕೂಡಿಸಿಕೊಂಡು ಕಲೆಕ್ಟರರನ್ನು ಕಾಣುವಂತೆ ಮಾಡುವೆ" ಎಂದನು. ಕೂಡಲೇ ಪ್ರೇಮಕುಮಾರಿಯ ಕಡೆ ತಿರುಗಿ "ನೀನಾವ ಪಕ್ಷಕ್ಕಿರುವೆ?" ಎಂದು ಪ್ರಶ್ನಿಸಿದನು.

ಈ ಮಾತುಗಳನ್ನೆಲ್ಲಾ ಕೇಳುತ್ತಾ ಪ್ರೇಮಕುಮಾರಿಯು ಆಲೋಚನಾಮಗ್ನಳಾಗಿದ್ದಳು. ಈ ಪ್ರಶ್ನೆಯು ಬೆಂಕಿಯ ಕಿಡಿಯಂತೆ ಕೆಲಸ ಮಾಡಿತು. ಆದರೆ ಹೇಳುವುದೇನು? ಮನಸ್ಸು ಮುದುಡಿ ಕುಳಿತುಕೊಂಡಿತು. "ಈ ಜಗಳದಲ್ಲಿ ನಾನು ಬೀಳುವುದಿಲ್ಲ. ನೀವೂ ತಿಳಿದವರು; ಅವರೂ ತಿಳಿದವರು. ನಾನು ಎರಡೂ ಕಡೆಗಳ ತಮಾಷೆ ನೋಡುತ್ತಿರುವೆನು" ಎಂದಳು. ಕಮಲಾಪ್ರಸಾದನು ಹೊಟನು.

* * * * *

ಆರು ದಿನಗಳು ಕಳೆದುವು. ಕಮಲಾಪ್ರಸಾದ ಮತ್ತು ಅವನ ಮಿತ್ರವೃಂದವು ದಿನಾಲೂ ಬಂದು ಬೇರೆ ಬೇರೆ ಸುದ್ದಿಗಳನ್ನು ಕೇಳಿಸುತ್ತಿದ್ದರು. ಯಾವ ಯಾವ ಶ್ರೀಮಂತರನ್ನು ಮುರಿದಾಯಿತು, ಯಾವ ಯಾವ ಅಧಿಕಾರಿಗಳನ್ನು ಸೆಳೆದುಕೊಂಡಾಯಿತು, ಯಾವ ಯಾವ ಕಚೇರಿಗಳನ್ನು ಮುತ್ತಿಯಾ

ಯಿತು, ಈಯೆಲ್ಲಾ ವರದಿಗಳು ದಾನಾನಾಥನಿಗೆ ಬರುತ್ತಿದ್ದುವು. ಇಂದು ಜಹಗೀರುದಾರರು ಸ್ಥಳ ಕೊಡುವುದಕ್ಕೆ ಅಸಮ್ಮತಿಸಿದರು ಎಂಬ ರಿಪೋರ್ಟು ಬಂದಿತು. ಇನ್ನುಳಿದವರು ಕಾಲೇಜಿನ ವಿದ್ಯಾರ್ಥಿಗಳು. ಅವರನ್ನೇನು ಮಾಡಲಿ? ಆದರೆ ಈ ಸುದ್ದಿಗಳನ್ನೆಲ್ಲಾ ಪ್ರೇಮಕುಮಾರಿಗೆ ತಿಳಿಯದಂತೆ ಇರಿಸಲು ಯತ್ನಿಸುತ್ತಿದ್ದ. ಆದರೆ ಕಮಲಾಪ್ರಸಾದನು ಸುಮ್ಮನಿರಬೇಕಲ್ಲ? ಹೋಗುವಾಗ ಅವಳಿಗೆಲ್ಲ ಹೇಳಿಯೇ ಹೋಗುತ್ತಿದ್ದ.

ಏಳನೆಯ ದಿನ ಸಂಜೆ ಕಮಲಾಪ್ರಸಾದನು ತನ್ನ ಸಂಗಾತಿಗಳೊಂದಿಗೆ ಬಂದು ದಾನಾನಾಥನೊಡನೆ "ಒಂದು ಸುತ್ತು ತಿರುಗಾಡಿಕೊಂಡು ಬರೋಣವೆ?" ಎಂದನು.

ದಾನಾನಾಥನು "ನಾನೇಕೆ? ಇವರೆಲ್ಲ ಇರುವರಲ್ಲ?" ಎಂದು ಉದಾಸೀನಭಾವದಿಂದ ಹೇಳಿದನು.

ಕಮಲಾಪ್ರಸಾದ– ಅದಾಗದು. ಸ್ವಲ್ಪ ಹೊರ ಬಂದು ಇಂದಿನ ಕತೆಯನ್ನು ನೋಡು. ಒಂದು ಸಾವಿರ ಜನರು, ನನ್ನ ಸೇನೆ! ಅವನ ಮಾತು ಕೇಳಲು ಹೋಗುವಂತೆ ಸಭೆಗೆ ಹೋಗಿ, ಅಲ್ಲಿ ಕೋಲಾಹಲವೆಬ್ಬಿಸುವರು. ಇನ್ನೂರು ಮುನ್ನೂರು ಜನರು ಒಂದೊಂದು ಪೈಯನ್ನು ಕೊಡಲಿರುವರು.

ದಾನಾನಾಥ ಇನ್ನೂ ನನ್ನ ಭಾಷಣ ತಯಾರಾಗಲಿಲ್ಲ. ನಾನಲ್ಲಿಗೆ ಬಂದರೆ ಅದು ಅರ್ಧದಲ್ಲೇ ಉಳಿದೀತು.

ಕಮಲಾಪ್ರಸಾದ– ಬೇಗನೇ ಬರೆಯಬಾರದೆ? ಇಷ್ಟು ದಿನಗಳವರೆಗೇನು ನಿದ್ದೆ ಮಾಡುತ್ತಿದ್ದೆಯೇ?

ಕಡೆಗೆ ಅವರಿಬ್ಬರೂ ಹೊರಟರು. ಮೊದಲಿನಿಂದಲೂ ಪ್ರೇಮಾ ಇವರ ಮಾತನ್ನು ಕೇಳುತ್ತಿದ್ದಳು. ಅವಳಿಗೆ ಚಿಂತೆಯುತ್ಪನ್ನವಾಯಿತು. "ಇಷ್ಟು ವಿರೋಧವಿರುವಾಗ ಅಲ್ಲಿ ದಂಗೆಯಾಗದೆ? ಅವರಿಗೆ ಇದರ ಸುಳಿವೇ ಇಲ್ಲವೆ? ನಗರವಿಡೀ ಈ ರೀತಿ ನಡೆದಿರುವಾಗ ಈ ಸುದ್ದಿಯು ಅವರ ಕಿವಿಗೆ ಬೀಳದಿದ್ದೀತೆ? ಅವರಿಗೂ ಸಹಾಯಕರಿರುವರಷ್ಟೆ? ಅವರಾದರೂ ಏಕೆ ಇವರನ್ನು ನಿಲ್ಲಿಸುವುದಿಲ್ಲ? ಅವರೆಲ್ಲರಿಗೆ ಜೀವ ಬೇಡವಾಯಿತೆ? ಇಂದು ಈ ಕಡೆಯುವರದೇ ಸಭೆಯಾಗಲಿ. ಇವರ ಸ್ಫೂರ್ತಿ ಕಡಮೆಯಾದೊಡನೆ, ಒಂದೆರಡು ತಿಂಗಳ ಅನಂತರ, ಅವರು ಬೇಕಾದುದನ್ನು ಮಾಡಬಹುದಲ್ಲ? ತಾನು ಹೇಳಿದರೆ ಅವರು ಕೇಳಿಯಾರೆ? ಅಥವಾ ತನ್ನ ಪತಿಯ ಪಕ್ಷವಹಿಸಿ ಮಾತಾಡುವಳೆಂದು ಭಾವಿಸಿಯಾರೆ?" ಎಂದೆಲ್ಲ ಯೋಚಿಸುತ್ತಿದ್ದಳು.

ಒಂದೆರಡು ತಾಸು ಪ್ರೇಮಾ ಇದೇ ಚಿಂತೆಯಲ್ಲಿದ್ದಳು. ಹೇಗೆ ಆಲೋ

ಚಿಸಿದರೂ ನಿಶ್ಚಯವಾಗುತ್ತಿದ್ದಿಲ್ಲ. ಕೆಲವು ಸರ್ತಿ ಪತ್ರ ಬರೆಯಲು ಕುಳಿತಳು. ಅವನಿಗೆಲ್ಲಿಯಾದರೂ ಪತ್ರ ದೊರೆಯದಿದ್ದರೆ? ಎಂಬ ಸಂದೇಹವಾಯಿತು. ಕೂಡಲೇ ಆ ಯೋಚನೆಯನ್ನೂ ಬಿಟ್ಟಳು.

ಸಂಜೆ ಗಂಟೆ ನಾಲ್ಕಾಯಿತು. ಪ್ರೇಮಕುಮಾರಿಗೆ ಅಳು ಬಂತು. ಇಬ್ಬರು ಜೀವದ ಗೆಳೆಯರು ಇಂದು ಬದ್ಧವೈರಿಗಳಾದುದು ತನಗಾಗಿ. ಅಮೃತರಾಯನೊಡನೆ ತನ್ನ ಮಾತು ಬೆಳೆಯದಿದ್ದರೆ ಇಂದು ಈ ಕಷ್ಟವಿತ್ತೆ? ಅವಳು ಮಾನಸಿಕ ವ್ಯಗ್ರತೆಯಿಂದ ಒಮ್ಮೆ ನಿಲ್ಲುತ್ತಿದ್ದಳು, ಒಮ್ಮೆ ಕುಳಿತು ಕೊಳ್ಳುತ್ತಿದ್ದಳು. ಅವಳ ಕರುಣೆ, ಅವಳ ಕೋಮಲತೆಯು ಅಮೃತರಾಯ ನನ್ನು ಸಭೆಗೆ ಹೋಗದಂತೆ ತಡೆಯುವುದಕ್ಕಾಗಿ ಅವನ ಮನೆಗೆ ಹೋಗಲು ಅವಳನ್ನು ಪ್ರೇರಿಸುತ್ತಿತ್ತು. ಸ್ತ್ರೀಸಹಜ ಸಂಕೋಚವು ಒಂದು ಕ್ಷಣ ಲುಪ್ತ ವಾಯಿತು. ದಾನಾನಾಥನಿಗೆ ಕೆಡುಕೆನ್ನಿಸಿದರೆ? ಎಂದೊಮ್ಮೆ ಭಯವಾಯಿತು. ಆದರೆ ಅದನ್ನು ಅವಳ ತೇಜಸ್ವೀ ಗರ್ವವು ಸೋಲಿಸಿತು. ತಾನು ಯಾರ ಕೈಕೆಳಗಿನವಳೂ ಅಲ್ಲ – ಪ್ರೇಮ ಪತಿಗಾಗಿ; ಭಕ್ತಿ ಅಮೃತರಾಯನಿಗೆ! ಒಂದು ನಿಶ್ಚಯಕ್ಕೆ ಬಂದು, ಆಳಿನೊಡನೆ ಗಾಡಿ ತರಹೇಳಿದಳು.

ಈ ಮಾತು ಅವಳ ಅತ್ತೆಗೆ ಕೇಳಿ, "ಎಲ್ಲಿಗೆ ಹೋಗುವೆ?" ಎಂದು ಕೇಳಿದಳು.

ಪ್ರೇಮಾ– ಒಮ್ಮೆ ಅಮೃತರಾಯನಲ್ಲಿಗೆ ಹೋಗಿಬರುವೆನಮ್ಮ. ಇಂದು ಜಗಳವಾಗುವ ಸಂಭವವಿದೆ. ಆದುದರಿಂದ ಅವನು ಸಭೆಗೆ ಹೋಗದಂತೆ ತಡೆಯಬೇಕಾಗಿದೆ.

ಅತ್ತೆ– ಒಳ್ಳೆಯದು, ಮಗು. ನಾನೂ ನಿನ್ನೊಂದಿಗೆ ಬರುವೆನು. ನನ್ನ ಮಾತನ್ನು ಅವನು ಕೇಳದಿರನು. ಇವರಿಬ್ಬರೊಳಗೆ ಯಾಕೆ ಈ ವೈರ ವುಂಟಾಯಿತೋ ದೇವರೇ ಬಲ್ಲ.

ಪ್ರೇಮಾ– ಇದೆಲ್ಲಾ ನನ್ನಣ್ಣನ ಕೆಲಸ ಅತ್ತೆ. ಅವನಿಗೆ ಮೊದಲಿ ನಿಂದಲೂ ಅಮೃತರಾಯನನ್ನಾಗುವುದಿಲ್ಲ.

ಗಾಡಿಯು ಬಂದಿತು. ಇಬ್ಬರೂ ಅಮೃತರಾಯನ ಮನೆಗೆ ಹೋದರು. ಅಲ್ಲಿ ಅಮೃತರಾಯನು ನಗರಭವನಕ್ಕೆ ಹೋಗಿ ಹತ್ತು ನಿಮಿಷವಾಯಿತಷ್ಟೆ ಎಂದು ತಿಳಿದು ಬಂತು. ಪ್ರೇಮಾ ಈಗ ಮಾಡುವುದೇನು? 'ಟೌನ್ ಹಾಲಿ'ಗೆ ಹೋಗುವುದು ಉಚಿತವಲ್ಲ. ಆದರೆ ಇನ್ನೂ ಆ ಸಮಾರಂಭವು ಆರಂಭವಾಗದಿದ್ದರೆ ಅವನೊಡನೆ ಒಂದೆರಡು ಮಾತಾಡಬಹುದಲ್ಲ! ಹೆಚ್ಚು ಆಲೋಚನೆ ಮಾಡಲು ಸಮಯವಿಲ್ಲ. ಗಾಡಿಯವನೊಡನೆ 'ಟೌನ್ ಹಾಲಿಗೆ!

ಜರೂರು! ಇನಾಮು ಕೊಡುವೆನೆ'ಂದಳು. ಇನಾಮಿನ ಮಾತು ಹೊರ ಟೊಡನೆಯೇ ಕುದುರೆಗೆ ಗಾಡಿಯವನು ಹೊಡೆದರೂ, ಅದು ಬಳಲಿದ್ದುದ ರಿಂದ ಬಹಳ ಓಡಲಿಲ್ಲ. ಅಂತೂ ನಗರಭವನಕ್ಕೆ ಮುಟ್ಟುವಾಗ ಇಪ್ಪತ್ತು ನಿಮಿಷ ತಡವಾಯಿತು. ಇಬ್ಬರೂ ಗಾಡಿಯಿಂದಿಳಿದು ಭವನದೊಳಕ್ಕೆ ಹೋದರು. ಅಮೃತರಾಯನು ವೇದಿಕೆಯ ಮೇಲಿದ್ದನು. ನೂರಾರು ಜನರು ಗುಲ್ಲೆಬ್ಬಿಸುತ್ತಿದ್ದರು. ಮಹಿಳೆಯರಿಗೆ ವ್ಯವಸ್ಥಿತವಾದ ಪ್ರತ್ಯೇಕ ಸ್ಥಳದಲ್ಲಿ ಅವರಿಬ್ಬರೂ ಕುಳಿತರು.

ಅಮೃತರಾಯ– "ಮಹನೀಯರೇ, ಸ್ವಲ್ಪ ಶಾಂತರಾಗಿರಿ! ನನ್ನದೇನೂ ದೀರ್ಘ ಭಾಷಣವಿಲ್ಲ. ಒಂದೆರಡು ಮಾತುಗಳನ್ನು ನಿವೇದಿಸಲಿದೆ . . . . .

ಅಷ್ಟರಲ್ಲೆ ಕೆಲವರು– "ಧರ್ಮದ್ರೋಹಿ!" ಎಂದು ಬೊಬ್ಬಿಟ್ಟರು.

ಅಮೃತರಾಯ– "ನಾನು ಧರ್ಮದ್ರೋಹಿಯೆಂದು ಹೇಳುವವರಾರು?"

"ಮತ್ತೇನು ನೀವು? ನೀವೇನು ವೇದ ಓದುವಿರಾ?" ಎನ್ನುತ್ತ ಕೆಲವರು. ನಾಲ್ಕೂ ಕಡೆಗಳಿಂದ ಚಪ್ಪಾಳೆ ಬಾರಿಸಿ ಗುಲ್ಲೆಬ್ಬಿಸಿದರು.

ಅಮೃತರಾಯ– ಇಲ್ಲಿಗೆ ಕೆಲವರು ಸಭಾಕಾರ್ಯಕ್ಕೆ ವಿರೋಧವಾಗಿ ಬಂದಿರುವರೆಂದು ನನಗೆ ಗೊತ್ತು. ಅವರನ್ನು ಯಾರು ಕಳುಹಿಸಿರುವರೋ ಅವರನ್ನೂ ತಿಳಿದಿರುವೆ . . . . .

ಒಬ್ಬನು– "ನೀವು ಯಾರ ಮೇಲಾದರೂ ಆಕ್ಷೇಪವೆತ್ತುವುದೇಕೆ? ಅದರ ಪರಿಣಾಮ ಕೆಟ್ಟದಾದೀತು" ಎಂದು ಬೊಬ್ಬಿಟ್ಟನು.

ಅಮೃತರಾಯನ ಪಕ್ಷದ ಯುವಕನೊಬ್ಬನು, "ನಿಮಗೆ ಇಲ್ಲಿರಬೇಕೆಂದಾದರೆ, ಸುಮ್ಮನೆ ಕುಳಿತು ಕೇಳಿರಿ. ಇಲ್ಲವಾದರೆ ಹೊರಗೆ ನಡೆಯಿರಿ" ಎಂದು ಗರ್ಜಿಸಿದನು.

ಕೆಲವರು– "ಭವನವು ಯಾರಪ್ಪನದೂ ಅಲ್ಲ. ಅಲ್ಪ ಸ್ವಲ್ಪ ಸಾಹಸ ವಿದೆಯಾದರೆ ಕೆಳಗಿಳಿಯಿರಿ" ಎನ್ನುತ್ತಾ ದೊಣ್ಣೆಗಳನ್ನೆತ್ತಿದರು.

ಅಮೃತರಾಯನು "ನೀವು ಜಗಳ ಕೆದರಲು ಬಂದವರೆ? ಜಾಗ್ರತೆ! ಜಗಳವಾದರೆ, ಅದರ ಹೊಣೆ ನಿಮ್ಮ ಮೇಲೆ" ಎಂದು ಗಟ್ಟಿಯಾಗಿ ಹೇಳಿದನು.

ಕೆಲವರು– "ನೀವು ಶೂಲಕ್ಕೇರಿಸುವಿರಾ? ನಿಮ್ಮದೇ ರಾಜ್ಯವೇನು? ನೀವೇ ಜರ್ಮನಿಯ ಕೈಸರರೇನು?" ಎನ್ನುತ್ತ ಬೊಬ್ಬಿರಿದರು.

ಇದಕ್ಕೆ ಅನುಮೋದನವಾಗಿ ಪುನಃ ಕರತಾಡನವಾಯಿತು.

ಇಷ್ಟರಲ್ಲಿ ಒಬ್ಬ ಯುವಕನು ಸಿಟ್ಟಿನಿಂದ ಕೆಂಡವಾದನು. ಒಬ್ಬ

ಪುಂಡನ ಬಳಿ ಮುಂದುವರಿದನು. ಮತ್ತೆ ಕೇಳುವುದೇನು! ಕೆಲವರು ಕುರ್ಚಿ
ಬೆಂಚುಗಳನ್ನು ಹೊತ್ತುಕೊಂಡು ವೇದಿಕೆಯ ಕಡೆಗೆ ಹಾರಿದರು. ಕಾಲೇಜಿನ
ವಿದ್ಯಾರ್ಥಿಗಳ ರಕ್ತವೂ ಬಿಸಿಯಾಯಿತು. ಅವರೂ ಕುರ್ಚಿಗಳನ್ನೆತ್ತಿದರು.
ಅಮೃತರಾಯನು ವಿದ್ಯಾರ್ಥಿಗಳನ್ನು ಶಾಂತಪಡಿಸತೊಡಗಿದನು. ಆದರೆ
ಆ ಗಲಾಟೆಯಲ್ಲಿ ಯಾರು, ಯಾರನ್ನು ಕೇಳುವರು? ಇತ್ತಂಡವೂ ಯುದ್ಧಕ್ಕೆ
ಸಿದ್ಧವಾಯಿತು, ಎನ್ನುವಷ್ಟರಲ್ಲಿ ಮಹಿಳೆಯೊಬ್ಬಳು ಬಂದು ವೇದಿಕೆಯ
ಮೇಲೆ ನಿಂತಳು. ಎಲ್ಲರ ಲಕ್ಷವೂ ಆ ಕಡೆಗೆ ಸರಿಯಿತು. ಅವಳನ್ನು
ನೋಡುತ್ತಲೇ ಎಲ್ಲರೂ ಸ್ಥಬ್ಧರಾದರು. ಎತ್ತಿದ ಕೈಗಳಲ್ಲಿ ಕುರ್ಚಿಗಳು
ಹಾಗೆಯೇ ಇದ್ದುವು. "ಇವಳು ಯಾರಾಗಿರಬಹುದು?" ಎಂಬ ಪ್ರಶ್ನೆಯು
ಎಲ್ಲರ ಮನಸ್ಸಿನಲ್ಲಿಯೂ ಮೂಡಿತು.

ಮಹಿಳೆಯು ಪ್ರಕಂಪಿತ ಸ್ವರದಿಂದ ಹೇಳತೊಡಗಿದಳು: "ಮಹನೀ
ಯರೇ, ತಮ್ಮ ಪುತ್ರಿ, ತಮ್ಮ ತಂಗಿಯೋರ್ವಳು ಯಾಚಿಸುತ್ತಾಳೆ; ನಿರಾಶೆ
ಪಡಿಸಲಾರಿರಷ್ಟೆ? . . . .

ವೃದ್ಧನೊಬ್ಬನು "ನೀವು ಯಾರು?" ಎಂದು ಪ್ರಶ್ನಿಸಿದನು.

ಮಹಿಳೆ– ನಾನು ಈ ನಗರದ ಶ್ರೀಮಂತ ಬದರೀಪ್ರಸಾದರ ಪುತ್ರಿ.
ಈಗ ನಿಮ್ಮೆಲ್ಲರ ಪುತ್ರಿ ಮತ್ತು ತಂಗಿ. ಈಶ್ವರನಿಗಾಗಿ ಶಾಂತರಾಗಿರಿ.
ಇಷ್ಟು ನಾನು ಯಾಚಿಸಕೂಡದೆ? ಇಂದಿನ ಸಭೆಯು ಯಾವುದಕ್ಕಾಗಿ ಎಂದು
ತಿಳಿದಿರುವಿರಾ? ಈ ನಗರದ ಸ್ತ್ರೀಯರು, ಆಶ್ರಯಹೀನ, ಅನಾಥೆಯರು
ತಮ್ಮ ಮಾನಮರ್ಯಾದೆಯನ್ನು ರಕ್ಷಿಸುತ್ತಿರಬೇಡವೆ? ಅವರು ದಲಿತ
ರಾದರೇ ನಿಮಗೆ ಸಂತೋಷವೆ? ಅದಕ್ಕಾಗಿ, ಅವರಿಗೊಂದು ಸ್ಥಳವನ್ನು
ನಿರ್ಮಿಸುವ ಸಲುವಾಗಿ, ಸಹಾಯವನ್ನು ಕೇಳಲು ಇಂದಿನ ಸಭೆ. ಅನಾಥ
ಸ್ತ್ರೀಯರಿಗಾಗುವ ಕಷ್ಟವನ್ನು ತಾವು ನೋಡಲಾರಿರಿ. ಆದರೆ ಅದನ್ನು
ಗ್ರಹಿಸಬಹುದಷ್ಟೆ? ಅವರನ್ನು ಎಷ್ಟು ಜನರು ತಮ್ಮ ಕುವಾಸನೆಯನ್ನು
ತೀರಿಸುವ ವಸ್ತುವೆಂದು ತಿಳಿಯುವುದಿಲ್ಲ? ಎಷ್ಟೋ ನಾರಿಯರು ತಮ್ಮ
ಜೀವನನಿರ್ವಾಹಕ್ಕಾಗಿ ದಲಿತರಾಗುವುದಿಲ್ಲವೆ? ಅಂಥವರ ಮೇಲೆ ತಮಗೆ
ದಯೆಯಿಲ್ಲವೆ? ತಮಗೆ ಹಳಸಿದ ರೊಟ್ಟಿ, ಚಿಂದಿಯ ಬಟ್ಟೆಯಾದರೂ ಇರು
ತ್ತಿದ್ದರೆ, ಅವರು ತಮ್ಮ ಸತೀತ್ವವನ್ನು ಕೊನೆಯ ಗಳಿಗೆಯ ವರೆಗೆ ರಕ್ಷಿಸಿ
ಕೊಳ್ಳುತ್ತಿದ್ದಿಲ್ಲವೆ? ಸ್ತ್ರೀಯರಿಗೆ ತಮ್ಮ ಸತೀತ್ವದಿಂದ ಹೆಚ್ಚಿನದೇನೂ ಈ
ಪ್ರಪಂಚದಲ್ಲಿಲ್ಲ. ಯಾವ ವಸ್ತುವೂ ಅದರ ಬೆಲೆಗೆ ಬರಲಾರದು. ನಿಮ
ಗೆಲ್ಲರಿಗೂ ಕನ್ನೆಯರೂ, ತಂಗಿಯರೂ ಇರಬಹುದು. ಅವರಿಗಾಗಿ ನೀವೇನೂ

ಮಾಡುವುದಿಲ್ಲವೆ? ನಿಮ್ಮೊಳಗೆ ಒಬ್ಬನಾದರೂ ಹೃದಯವಿರುವವನಿಲ್ಲವೆ? ಅನಾಥರಕ್ಷಣೆಯು ಧರ್ಮವಿರುದ್ಧವೆಂದು ಹೇಳುವವರಾರು? ಅವರು ಧರ್ಮದ ಹೆಸರನ್ನು ಕೆಡಿಸುವವರು. ದಯೆಯೇ ಧರ್ಮದ ಮೂಲ. ನನ್ನ ಸಹೋದರ ಅಮೃತರಾಯನು ಇಂಥ ಸ್ಥಾನವನ್ನು ನಿರ್ಮಿಸ ಹೊರಟಿರುವನು. ಅವನ ಎಲ್ಲಾ ಸಂಪತ್ತನ್ನು ಅದಕ್ಕಾಗಿ ಅರ್ಪಿಸಿಯಾಯಿತು. ಈಗ ಈ ಕಾರ್ಯಕ್ಕೆ ನಿಮ್ಮ ಸಹಾಯವನ್ನು ಕೋರುತ್ತಾನೆ. ಯಾವನ ಬಳಿ ಲಕ್ಷಗಟ್ಟಲೆಯಿತ್ತೋ, ಅವನದನ್ನು ಆ ಪುಣ್ಯಕಾರ್ಯಕ್ಕೆ ಧಾರೆಯೆರೆದು, ಇಂದು ನಿಮ್ಮೆದುರಲ್ಲಿ ಭಿಕ್ಷೆ ಬೇಡುತ್ತಾನೆ. ತಮ್ಮಲ್ಲಿ ಮನಸ್ಸಿದ್ದವರು ಏನಾದರೂ ಕೊಡಿರಿ. ಮನಸ್ಸಿಲ್ಲದವರು 'ಬೇರೆ ಕಡೆ ಹೋಗಿರಿ' ಎಂದು ಹೇಳಿರಿ. ಆದರೆ ಅವನಿಗೆ ವಿರೋಧ ಮಾಡದಿರಿ. ಅವನನ್ನು ಬೈಯಬೇಡಿರಿ. ಈ ವ್ಯವಹಾರವು ತಮ್ಮಂತಹರಿಗೆ ಯೋಗ್ಯವೆನಿಸುವುದಿಲ್ಲ.

ಅಷ್ಟರಲ್ಲಿ ಮಹನೀಯನೊಬ್ಬನು "ಕಮಲಾಪ್ರಸಾದನಿಗೇಕೆ ತಿಳಿಯು ಹೇಳುವುದಿಲ್ಲ?" ಎಂದು ಕೇಳಿದನು. ಇನ್ನೊಬ್ಬನು "ದಾನಾಸಾಥನಿಗೇಕೆ ಹೇಳುವುದಿಲ್ಲ?" ಎಂದು ಪ್ರಶ್ನಿಸಿದನು.

ಪ್ರೇಮಕುಮಾರಿಯು ಗಾಬರಿಗೊಂಡಳು. ಇದಕ್ಕೇನು ಉತ್ತರ ಹೇಳಲಿ? ಪ್ರಶ್ನೆಯು ನ್ಯಾಯಸಮ್ಮತವಾದುದು. ತನ್ನವರನ್ನು ತಡೆಯಲಾರದವಳು ಬೇರೆಯವರ ರಗಳೆಗೇಕೆ ಹೊರಡುವುದು? ಸ್ವಲ್ಪ ಯೋಚಿಸಿ, "ನಿಜ. ಆದರೆ, ಈಗ ಅರ್ಧ ಗಂಟೆಯ ಮೊದಲು ಈ ರೀತಿಯಾಗುವುದೆಂದು ನನಗೆ ತಿಳಿದಿತ್ತೆ. ತಂದೆಯಾಗಲಿ, ಪತಿಯಾಗಲಿ, ಅಣ್ಣತಮ್ಮಂದಿರಾಗಲಿ, ಯಾರೇ ಆಗಲಿ, ಈ ಸಭೆಗೆ ವಿಘ್ನಕಾರಿಗಳಾದವರನ್ನು ಹೀನವೃತ್ತಿಯವರೆಂದು ತಿಳಿಯುತ್ತೇನೆ. ವಿಚಾರವಂತರಾರೂ ಇಂತಹ ಹೇಯಕಾರ್ಯವನ್ನು ಮಾಡಲಾರರೆಂದು ನಂಬುತ್ತೇನೆ" ಎಂದಳು.

ಪ್ರೇಮಕುಮಾರಿಯು ಇದೇ ರೀತಿ ಒಂದು ಅರ್ಧ ಗಂಟೆಯ ವರೆಗೆ ಮಾತಾಡಿದಳು. ನಿರ್ಭಯ ಸತ್ಯ ಪ್ರೇಮದಿಂದ, ತನ್ನ ಪ್ರತಿಭೆಯಿಂದ ಸಭೆಯವರ ಮನಸ್ಸನ್ನು ಅಪಹರಿಸಿಬಿಟ್ಟಳು. ಆಕಸ್ಮಿಕವಾಗಿ ಅವಳು ಬಂದುದು ಕಣ್ಣುಕಟ್ಟು ಮಾಡಿಬಿಟ್ಟಿತು. ಮಹಿಳೆಯನ್ನವಮಾನಿಸುವುದು, ಅಮೃತರಾಯನ ಮಾನಖಂಡನೆ ಮಾಡುವಷ್ಟು ಸುಲಭವಲ್ಲ. ಮತ್ತು ಈ ಸ್ತ್ರೀಯೆಂದರೆ ಸಾಮಾನ್ಯೆಯಲ್ಲ. ನಗರದ ಗಣ್ಯ ಮಹನೀಯರ ಕನ್ಯೆ. ಜನರ ಮನಸ್ಸು ತಿರುಗಿತು. ವಿರೋಧವಾಗಿ ಬಂದವರು ವಿನೀತರಾದರು. ಅವಳು ವಂತಿಗೆಗಾಗಿ ತನ್ನ ಸೆರಗನ್ನೊಡ್ಡಿದೊಡನೆಯೇ, ಎಲ್ಲರಿಗಿಂತಲೂ ಮೊದಲು, ಎಲ್ಲರಿ

ಗಿಂತಲೂ ಹೆಚ್ಚು, ಆರಂಭದಲ್ಲಿ ದೊಣ್ಣೆಯೆತ್ತಿದ ಆ ಪೋಕರಿಯು ಕೊಟ್ಟನು. ಪೋಕರಿಯು ಒಬ್ಬನ ಪ್ರಾಣ ತೆಗೆಯಬಲ್ಲನಾದರೆ, ಒಬ್ಬನಿಗೆ ಜೀವಕೊಡಲೂ ಸಿದ್ಧ. ಅವನ ಮೇಲ್ಪಂಕ್ತಿಯನ್ನು ಎಲ್ಲರೂ ಅನುಸರಿಸಿದರು. ಬರಿಯ ವಿನೋದ ನೋಡುವುದಕ್ಕೆ ಬಂದಿದ್ದವರೂ, ಏನಾದರೂ ಕೊಡದಿರಲಿಲ್ಲ. ಜನಸಮೂಹವು ವಿಚಾರದಿಂದಲ್ಲ, ಆವೇಶದಿಂದ ಕೆಲಸ ಮಾಡುತ್ತದೆ ಎಂದು ಸಿದ್ಧವಾಯಿತು. ಎಷ್ಟೋ ಜನರು ಮನೆಯಿಂದ ಹಣ ತಂದರು. ಎಷ್ಟೋ ಜನರು ಬಂಗಾರದ ಉಂಗುರ, ಕಂಠದ ಹಾರ, ಕಿವಿಯ ಒಂಟಿಗಳನ್ನು ತೆಗೆದು ರಾಶಿ ಹಾಕಿದರು. ಅದೂ ಶುದ್ಧ ಪೋಕರಿಗಳು. ತಮ್ಮ ಕೀರ್ತಿಯನ್ನೆ ರಾಶಿ ಹಾಕಿದರೋ ಎಂಬಂತೆ ಕೆಲವರು ಅವಳ ಕಾಲಿಗೆ ಬಿದ್ದು ಮನೆಗೆ ಹೋದರು. ಅವರೆಲ್ಲ ತೀರ್ಥಸ್ನಾನ ಮಾಡಿದಷ್ಟು ಪ್ರಸನ್ನರಾಗಿದ್ದರು.

ಸಭೆಯು ವಿಸರ್ಜಿತವಾಯಿತು. ಅಮೃತರಾಯನು "ಇದೇನು ಪ್ರೇಮಾ, ಎಂತಹ ಅನರ್ಥ ಮಾಡಿದೆ? ದಾನಾನಾಥನು ನಿನ್ನನ್ನು ಕೊಂದೇ ಬಿಟ್ಟಾನು" ಎಂದನು.

ಪ್ರೇಮಾ ನಗುತ್ತಾ "ಈ ಪಾಷಂಡಿಗಳನ್ನು ತಡೆದವಳಿಗೆ ಅವರನ್ನು ತಡೆಯುವುದು ಕಷ್ಟವೆ?" ಎಂದಳು.

ಅಮೃತರಾಯನು "ನಿಜ. ನೀನು ಏನೂ ಮಾಡಬಲ್ಲೆ. ಪ್ರೇಮಾ ನನ್ನ ಅಜ್ಞಾನಕ್ಕೆ ನಾನೀಗ ಪಶ್ಚಾತ್ತಾಪಪಡುತ್ತಿದ್ದೇನೆ." ಎಂದನು.

ಪ್ರೇಮಾ ಕಠೋರಳಾಗಿ "ನಿನ್ನ ಇದೇ ಮನಸ್ಸಷ್ಟೆ?" ಎಂದಳು.

---

## ೧೨

ಪೂರ್ಣೆಯು ಪ್ರಾತಃಕಾಲ ಬೇಗ ಎದ್ದಳು. ಮನಸ್ಸಿಲ್ಲದ ಮನಸ್ಸಿನಿಂದ ಸುಮಿತ್ರೆಯ ಕೋಣೆಯ ಕಡೆಗೆ ನಡೆದಳು. ಸುಮಿತ್ರೆಯು ಎಚ್ಚರದಿಂದಿರುವಳೋ, ನಿದ್ದೆ ಮಾಡುವಳೋ ಎಂದು ನೋಡಬಯಸಿದಳು. ಅವಳನ್ನು ನೋಡಿ, ರಾತ್ರಿಯ ಘಟನೆ ಅವಳಿಗೆ ತಿಳಿದಿದೆಯೋ ಇಲ್ಲವೋ ಎಂಬುದನ್ನು ಅರಿಯಬೇಕು ಎಂದುಕೊಂಡಳು. ಸುಮಿತ್ರೆಯು ಮಲಗಿದಲ್ಲೆ ಏನೋ ಆಲೋಚಿಸುತ್ತಿದ್ದಳು. ಪೂರ್ಣೆಯನ್ನು ಕಂಡೊಡನೆಯೇ ಮುಗುಳುನಗೆ ನಕ್ಕಳು. ನಗುವ ಪ್ರಸಂಗವೇನೋ ಅವಳಿಗೇ ಗೊತ್ತು. ಆದರೆ ಇದರಿಂದ ಪೂರ್ಣೆಗೆ ಏನೋ ಒಂದು ರೀತಿಯ ಶಂಕೆಯುತ್ಪನ್ನವಾಯಿತು.

ಸುಮಿತ್ರೆಯು ಕೆದರಿದ ಕೂದಲನ್ನು ಸರಿಪಡಿಸುತ್ತಾ, ಎದ್ದು, "ಇಂದೇನು ಇಷ್ಟು ಬೇಗ ಎದ್ದೆ?" ಎಂದು ಕೇಳಿದಳು.

ಪ್ರಶ್ನೆಯೇನೋ ಸಾಧಾರಣದ್ದೇ. ಆದರೆ ಇದು ಮುಖ್ಯ ವಿಷಯದ ಭೂಮಿಕೆಯೆಂದು ಪೂರ್ಣೆಯು ಎಣಿಸಿದಳು. "ಬೇಗವೇನೂ ಅಲ್ಲ; ಯಾವಾಗಲಿನ ಸಮಯವೇ!" ಎಂದು ಉತ್ತರವಿತ್ತಳು.

"ಅಲ್ಲ, ಇಂದು ಬಹು ಬೇಗ! ನಿನಗೆ ರಾತ್ರಿ ನಿದ್ರೆ ಬಂದಿರಲಿಲ್ಲವೆ? ಕಣ್ಣುಗಳು ಕೆಂಪಾಗಿವೆ?"

ಪೂರ್ಣೆಯ ಹೃದಯವು ದಡದಡವೆಂದು ಬಡಿಯತೊಡಗಿತು. ಇದು ಮೊದಲಿನದಕ್ಕಿಂತ ಕಠಿನವಾದ ಎರಡನೆಯ ಪ್ರಶ್ನೆ. ಇದನ್ನು ಅವಳು ಹೇಗೆ ಒಪ್ಪಿಕೊಂಡಾಳು? – "ಹಾಗೇನೂ ಇಲ್ಲ. ಬಹಳ ನಿದ್ದೆ ಮಾಡಿದ್ದೆ. ಹೆಚ್ಚು ನಿದ್ದೆ ಮಾಡಿದರೂ ಹೀಗಾಗುವುದು" ಎಂದಳು. ಸುಮಿತ್ರೆಯು ನಗುತ್ತಾ ಒಪ್ಪಿಕೊಂಡಳು. ಪೂರ್ಣೆಯು ಮತ್ತೂ ಮುಂದುವರಿಸಿದಳು.

ಪೂರ್ಣಾ– ಇಷ್ಟೂ ನಿನಗೆ ಗೊತ್ತಿಲ್ಲವೆ? ನಿನಗೆ ಖಂಡಿತವಾಗಿ ನಿದ್ದೆ ಬಂದಿಲ್ಲ. ಇಡೀ ರಾತ್ರಿ ಜಾಗರಣೆಯಲ್ಲಿದ್ದೆಯೇನು?

ಸುಮಿತ್ರೆ– ನಾನು ಏನು ಮಾಡಿದರೂ ಕೇಳುವವರಾರಿದ್ದಾರೆ? ನನ್ನ ಭಾಗ್ಯದಲ್ಲಿ ಅಳುವುದಲ್ಲದೆ ಮತ್ತೇನೂ ಬರೆಯಲಿಲ್ಲ.

ಪೂರ್ಣಾ– ನೀನು ಹೀಗೇಕೆ ಮಾಡುವೆ? ಒಮ್ಮೆ ಅವನ ಬಳಿ ಹೋದರೇನು?

ರಾತ್ರಿಯ ಕತೆಯನ್ನು ಹೇಳಿಬಿಡುವುದೋ ಎಂದು ಸುಮಿತ್ರೆ ಗ್ರಹಿಸಿದಳು. ಆದರೆ ಅದೇಕೋ – ಹೇಳಲಿಲ್ಲ. "ಹೀಗೆಂದಿಗೂ ಆಗಲಾರದು. ಇಡೀ ಜೀವನವೇ ಹೀಗೆ ಕಳೆದರೂ ಸರಿ. ನನ್ನ ಅಪರಾಧವಿದ್ದರೆ, ನಾನು ಹೋಗಬೇಕಿತ್ತು. ಅನ್ಯಾಯ ಅವರು ಮಾಡಬೇಕು, ಸಮಾಧಾಪಡಿಸಬೇಕು ನಾನು. ಇದೊಳ್ಳೆಯ ನ್ಯಾಯ!" ಹೀಗೆ ಹೇಳುತ್ತಾ ಅವಳಿಗೆ ರಾತ್ರಿಯ ನೆನಪು ಬಂತು. ಅವರು ಎಚ್ಚತ್ತಿರಬೇಕು. ಬೇಕೆಂತಲೇ ನನ್ನನ್ನು ಮಾತಾಡಿಸದಿದ್ದುದಿರಬೇಕು ಎಂದು ತಿಳಿದುಕೊಂಡಳು. ಮತ್ತು ಮಾತನ್ನು ಮುಂದುವರಿಸಿದಳು – "ಮತ್ತೇಕೆ ನಾನು ಹೋಗಲಿ? ನಾನು ಮಾಡಿದ ಅಪರಾಧವೇನು; ಪೂರ್ಣಾ, ಪುರುಷರು ಸ್ತ್ರೀಯರನ್ನು ಪೀಡಿಸುವುದೇಕೆ? ನಾನು ನನ್ನ ತಂದೆ ಕೊಟ್ಟುದನ್ನು ಮಾತ್ರ ಖರ್ಚು ಮಾಡಿದರೂ ಅಪರಾಧವೆ?" ಎಂದಳು.

ಪೂರ್ಣೆಯು ರಹಸ್ಯಮಯ ಭಾವದಿಂದ ನಗುತ್ತಾ "ಇದೇನು ಒಂದು

ಹೊಸ ಮಾತು? ಪುರುಷರು ಸ್ತ್ರೀಯರ ರಕ್ಷಣಾಭಾರವನ್ನು ವಹಿಸು
ರಲ್ಲವೆ?" ಎಂದಳು.

ಸುಮಿತ್ರೆ– ರಕ್ಷಣೆ ಮಾಡುವುದಾದರೆ, ತಮ್ಮ ಸ್ವಾರ್ಥದಿಂದ. ಇಷ
ಮಾತ್ರವಲ್ಲ. ತಮ್ಮ ಸಂಪತ್ತಿಗೆ ಒಂದು ಸಂತಾನವನ್ನು ಇಚ್ಛಿಸುವುದಿ
ವಾದರೆ ಯಾರೂ ಸ್ತ್ರೀಯರ ವಿಷಯ ಮಾತೆತ್ತಲಾರರು. ಬಂಜೆಯರಾ
ಸ್ತ್ರೀಯರ ದುರ್ದಶೆಯನ್ನು ನೀನು ನೋಡುವೆಯಲ್ಲ? ವೇಶ್ಯೆಯರ ಕಾ
ಬುಡದಲ್ಲಿ ಪ್ರಾಣಬಿಡುವ ಲಂಪಟರ ಮಾತನ್ನು ಬಿಟ್ಟುಬಿಡು.

ಪೂರ್ಣಾ– ಆದರೆ, ಪುರುಷರ ಮೇಲೆಯೇ ಅಪರಾಧ ಹೊರಿಸು
ಕೆಲವು ಸ್ತ್ರೀಯರನ್ನು ನಾನು ಕಂಡಿರುವೆನಲ್ಲ?

ಸುಮಿತ್ರೆ– ಅದು ಕೆಲವು ಷಂಡರಿಂದಾಗಿ.

ಅಷ್ಟರಲ್ಲಿ ಕೆಲಸದಾಳು ಬಂದು "ರಾಯರು, ರೇಶ್ಮೆ ಕೋಟು ಎಲ್ಲಿ
ಯೆಂದು ಕೇಳುವರು" ಎಂದನು.

ಸುಮಿತ್ರೆ– ಎಲ್ಲಿಟ್ಟಿರುವರೋ, ಅಲ್ಲಿರಬಹುದು. ಇಲ್ಲಿ ಅವರ ದಾಸಿಯ
ರಾರೂ ಇಲ್ಲವೆಂದು ಹೇಳು.

ಆಳು ಕೈಜೋಡಿಸಿ "ಸ್ವಲ್ಪ ಹುಡುಕಿ ಕೊಡಿರಿ ತಾಯಿ; ಇಲ್ಲವಾದ
ನನ್ನ ಬೆನ್ನಿನ ಚರ್ಮ ಉಳಿಯಲಾರದು" ಎಂದು ಬೇಡಿದನು.

ಸುಮಿತ್ರೆ– ನಡೆ ಎಂದರೆ!

ಆಳು ಹೋದನು. ಪೂರ್ಣೆಯು "ಯಾಕಿನ್ನೂ ಕೆರಳಿಸುವೆ? ಬೀಗ
ಕೈ ಕೊಡು. ನಾನು ಹುಡುಕಿಕೊಡುವೆನು. ಅವರ ಸಿಟ್ಟೇನರಿಯದುದೆ?
ಎಂದಳು.

ಸುಮಿತ್ರೆ– ಯಾವ ಸಿಟ್ಟಿಗೂ ಬೆದರುವವಳಲ್ಲ ನಾನು. ಬೇಕಾದ
ಅವರೇ ಹುಡುಕಿಕೊಳ್ಳಲಿ.

ಆಳು ಪುನಃ ಬಂದನು. "ಟ್ರಂಕಿನಲ್ಲಿದೆಯಂತೆ. ತೆಗೆದುಕೊ
ಬೇಕಂತೆ" ಎಂದನು.

ಸುಮಿತ್ರೆ– ಅವರೇ ಹುಡುಕಿಕೊಳ್ಳಬೇಕೆಂದು ಹೇಳಿಲ್ಲವೇನು?

ಆಳು– ಹಾಗೆ ಹೇಳಿಲ್ಲ ಅಮ್ಮ.

ಸುಮಿತ್ರೆ– ಒಳ್ಳೆಯದು. ನಡೆ ಇಲ್ಲಿಂದ. ಅಲ್ಲ, ನಾನೇ ನಿನ
ಮಂಗಳಾರತಿ ಮಾಡಬೇಕೆ?

ಆಳು ಹೋದೊಡನೆಯೇ ಪೂರ್ಣೆಯು "ನೀನು ಉರಿಉರಿಯಾ
ಮಾತಾಡುವೆ ನಾನಿನ್ನು ಇಲ್ಲಿ ನಿಲ್ಲಲಾರೆ" ಎಂದು ಹೊರಟಳು.

ಸುಮಿತ್ರೆಯು ಅವಳ ಸೆರಗು ಹಿಡಿದುಕೊಂಡು, "ಓಡುವುದೆಲ್ಲಿಗೆ? ಸ್ವಲ್ಪ ನಿಲ್ಲು. ಇನ್ನೂ ತಮಾಷೆಯಿದೆ. ಹುಲಿಯಿದೆಯೇನು ಇಲ್ಲಿ?" ಎಂದು ತಡೆದಳು. ಅಷ್ಟರಲ್ಲಿ ಕಮಲಾಪ್ರಸಾದನ ಹಜ್ಜೆಗಳ ಶಬ್ದವು ಕೇಳ ತೊಡಗಿತು. ಪೂರ್ಣೆಯು ಗಾಬರಿಯಾಗತೊಡಗಿದಳು. ಕಮಲಾಪ್ರಸಾದನು ಕ್ರುದ್ಧಸ್ವರದಿಂದ ಮಾತಾಡುತ್ತಾ ಕೋಣೆಯೊಳಗೆ ಬಂದನು; "ಕುಳಿತು ಕೊಂಡು ಮಾತಾಡುವೆ! ಕೋಟನ್ನು ಕೇಳಿದರೆ ಏಳಲಿಕ್ಕಾಗುವುದಿಲ್ಲ. ನಿನ್ನಪ್ಪನೊಡನೆ ಹೇಳಿ, ಲಕ್ಷಾಧೀಶನ ಹೆಂಡತಿಯಾಗಬೇಕಿತ್ತು ನೀನು. ಇಲ್ಲಿಯ ಅವಸ್ಥೆ ಗೊತ್ತೇಯಿಲ್ಲ ನಿನಗೆ." ಎಂದು ಗುಡುಗುಟ್ಟಿದನು.

"ನನ್ನಪ್ಪನ ಸುದ್ದಿ ನಿಮಗೆ ಬೇಡ. ಅಲ್ಲಿ ಬೀಗದಕೈಯಿದೆ. ಬೇಕಾದರೆ ತೆಗೆದುಕೊಂಡು ಹೋಗಿರಿ. ನೀವು ಹೇಳಿದ ಹಾಗೆ ಕೇಳುವ ತೊತ್ತುಗಳು ಇಲ್ಲಿ ಯಾರೂ ಇಲ್ಲ."

"ನೀನೊಬ್ಬಳು ತಿಳಿದವಳು!"

"ನೀವು ಜಗಳವಾಡಲು ಬಂದವರೋ, ಅಂಗಿಗಾಗಿ ಬಂದವರೋ?"

"ಜಗಳವಾಡುವುದಕ್ಕೇ ಬಂದವನು."

"ಒಳ್ಳೆಯದು. ಹಾಗಾದರೆ ಹೇಳಿದನ್ನು ಕೇಳಿಕೊಳ್ಳಬೇಕಾದೀತು."

"ನನ್ನ ಕೋಟು ತೆಗೆದುಕೊಡುವೆಯೋ ಏನು?"

"ನೀವು ಒಳ್ಳೆಯ ಮನಸ್ಸಿನಿಂದ ಕೇಳುವುದೇ, ಪ್ರತಾಪದಿಂದಲೇ?"

"ಆಟೋಪದಿಂದಲೇ."

"ಹಾಗಾದರೆ ತೆಗೆದುಕೊಳ್ಳಿರಿ."

"ನೀನೇ ಕೊಡಬೇಕು."

"ಕೊಡುವುದಿಲ್ಲ."

"ಇದು ಒಳ್ಳೆಯದಲ್ಲ! ಅನರ್ಥವಾದೀತು ಸುಮಿತ್ರಾ! ನಾನು ಹೇಳಿಲ್ಲವೆಂದು ಬೇಡ! ಅನರ್ಥವಾಗಲಿದೆ!"

"ಏನು ಬೇಕಾದರೂ ಆಗಲಿ."

"ನೀನು ನಿನ್ನ ಮನೆಗೇ ಹೋಗಬೇಕಾದೀತು!"

"ಇದೇ ನನ್ನ ಮನೆ. ನಾನು ಇಲ್ಲಿಂದೆಲ್ಲಿಗೂ ಹೋಗಲಾರೆ."

"ಲಕ್ಷಾಧೀಶ ನಿನ್ನಪ್ಪನ ಮನೆಯಿದೆಯಲ್ಲ?"

"ಎಂದಿನ ವರೆಗೆ ಅಪ್ಪನ ಮನೆಯೋ, ಅಂದಿನ ವರೆಗಿತ್ತು. ಈಗ ಇದುವೇ ಮನೆ. ಒಂದು ವೇಳೆ ಹೋಗಬೇಕಾದರೂ, ಅನ್ನವಸ್ತ್ರಕ್ಕೆ ಬೇಕಾದಷ್ಟು ಇಟ್ಟುಬಿಡಿರಿ, ಅಂದರೆ ಮಾತ್ರ ಹೋಗುವೆನು. ಹೊಸತಾಗಿರುವಾಗ

ಉಪಯೋಗಿಸಿ, ಹಳತಾದ ಮೇಲೆ ಬಿಸಾಡಲು ನಾನೇನು ಕಾಲಿನ ಕಾ
ಯಲ್ಲ."

ಇಂತಹ ಉತ್ತರವನ್ನು ಕಮಲಾಪ್ರಸಾದನು ಇಂದಿನ ವರೆಗೆ ಕೇ
ಲಿಲ್ಲ. ಅವನ ಬತ್ತಳಿಕೆಯಲ್ಲಿದ್ದ ಅಸ್ತ್ರಗಳೆಲ್ಲವೂ ಮುಗಿದುವು. ಮನೆಯಿ
ಹೊರಡುವ ಹೆದರಿಕೆಯನ್ನು ತೋರಿಸಿಯೂ ಆಯಿತು. ಆದರೆ ಇದ
ದಕ್ಕೂ ಸುಮಿತ್ರೆಯು ಜಗ್ಗಲಿಲ್ಲ. ಅವನಿನ್ನು ಮಾಡುವದೇನು? ಸ್ತ್ರೀ
ಮೇಲೆ ಪುರುಷನ ಅಧಿಕಾರವು ನಾಮಮಾತ್ರವೆಂದು ಈಗ ತಿಳಿಯಿ
ಅವಳನ್ನು ಕೊಲ್ಲಲು ಸಾಧ್ಯವಿಲ್ಲ. ಮನೆಯಿಂದ ಹೊರಡಿಸಲೂ ಸಾಧ್ಯವಿ
ಒಂದು ವೇಳೆ ಅವಳ ಮುಖವನ್ನು ನೋಡದಿರಬಹುದು. ಇದರಿಂದ
ಸುಮಿತ್ರೆಗೆ ವ್ಯಸನವಿಲ್ಲ. ಈಗ ಅವನು ವಿವಶನಾಗಿ ಅವಳನ್ನು ಮೆಚ
ಬೇಕಾಯಿತು. ದುರ್ಬಲ ಅಸ್ತ್ರವಿದು. ಪೂರ್ಣೆಯೊಡನೆ "ನೋಡಿದೆ
ಪೂರ್ಣಾ! ನಾನೆಷ್ಟು ಸಮಾಧಾನದಿಂದಿದ್ದರೂ ಅವಳೇ ರೇಗಿಬೀಳುವಳ
ಎಂದನು.

ಪೂರ್ಣಾ– ತಿಳಿದವರಾದ ನೀವೇ ತಿಳಿಯುವುದಿಲ್ಲವಾದ ಮೇ
ಬೇರೆಯವರಿಗೇನು ಹೇಳಲಿ?

ಸುಮಿತ್ರೆ– ಮುಖದರ್ಶನವೇ ಪ್ರಮಾಣವಲ್ಲ ತಂಗಿ. ಅವ
ಯಾವುದರಿಂದಾಗಿ ತಿಳಿದವರಾದರು? ನಾನಾವುದರಿಂದ ತಿಳಿಯದವಳಾ
ನನ್ನಂತಹ ಸ್ತ್ರೀಯರನ್ನು ನಡೆಸಿಕೊಳ್ಳಲು ತಿಳಿಯದವರು ತಿಳಿದವರ
ಮೂರ್ಖರು ಕೂಡ ಅಲ್ಲ, ಪಶು! ಇವರ ಆಟೋಪವನ್ನು ನಾನೇಕೆ ಸಹಿ
ಬೇಕು? ಹತ್ತು ಮಾತುಗಳು ಪ್ರಿಯವಾಗಿದ್ದರೆ, ಒಂದು ಕಟೋಕ್ತಿಯ
ಸಹಿಸಿಕೊಳ್ಳಲೂ ಬಹುದು.

ಕಮಲಾಪ್ರಸಾದ– ಸುಮಿತ್ರಾ, ನಿನ್ನ ಆಯುಷ್ಯವು ದುಃಖಪೂ
ವಾದೀತು!

ಸುಮಿತ್ರೆ– ನನ್ನ ಕೂದಲು ದುಃಖಿಸೀತು. ನೀವು ಅಳುವಿರಿ.

ಕಮಲಾಪ್ರಸಾದ– ನಾನು ನೂರು ಮದುವೆ ಮಾಡಿಕೊಂಡೇನು!

ಸುಮಿತ್ರೆಯು ಯಾವ ಉತ್ತರವನ್ನು ಕೊಡುವುದು? ನಾನು ಸಾ
ಮದುವೆ ಮಾಡಿಕೊಂಡೇನು ಎಂದು ಹೇಳಿಯಾಳೆ? ಎಂದಿಗೂ ಸಾಧ್ಯವಿ
ತಿರಸ್ಕಾರದಿಂದ "ಒಬ್ಬಳನ್ನು ಆಳಲಿಕ್ಕೆ ಕೂಡದವರು ನೂರು ಜನರನ್ನು ಅ
ಲಿದೆಯೇ?" ಎಂದಳು.

ಕಮಲಾಪ್ರಸಾದನು ಸೋತನು. ಒಬ್ಬ ಅಬಲೆಯಿಂದ ಸೋತನ

ಅವನ ಬಾಯಿಯಿಂದ ಮಾತುಗಳೇ ಹೊರಡಲಿಲ್ಲ. ಆರಕ್ತನೇತ್ರಗಳಿಂದ ಸುಮಿತ್ರೆಯನ್ನೊಮ್ಮೆ ನೋಡಿ, ಕಾಲುಗಳನ್ನು ಹಿಂತಿರುಗಿಸಿದನು.

ಒಂದೆರಡು ನಿಮಿಷ ಮಹಿಳೆಯರಿಬ್ಬರೂ ಮೌನ. ಇಬ್ಬರೂ ಈ ಸಂಗ್ರಾಮದ ವಿವೇಚನೆಯನ್ನು ಮಾಡುತ್ತಿದ್ದರು. ಸುಮಿತ್ರೆಯು ವಿಜಯ ಗರ್ವದಿಂದ ಉಬ್ಬಿದ್ದಳು. ತಾನು ಮಾಡಿದುದರಲ್ಲಿ ಅನ್ಯಾಯವಿದೆಯೆಂದು ಅವಳಿಗೆ ತೋರಲಿಲ್ಲ. ಆದರೆ ಪೂರ್ಣೆಯ ವಿಚಾರದಂತೆ ದೋಷವೆಲ್ಲ ಸುಮಿತ್ರೆಯದೇ! ಕೋಟನ್ನು ತೆಗೆದುಕೊಟ್ಟಿದ್ದರೆ ಈ ಗಲಾಟೆಯಿತ್ತೆ? ಎಷ್ಟಾದರೂ ಸ್ತ್ರೀಯರು ಪುರುಷರನ್ನು ಕೆರಳಿಸಬಾರದೆಂದು ಅವಳ ಮತ. ಅವಳ ಕಲ್ಮನಸ್ಸಿನಿಂದ ಈ ರೀತಿ ಮಾತು ಹೊರಟುದು ಹೇಗೊ?

ಸುಮಿತ್ರೆಯೇ ಮಾತಿಗಾರಂಭಿಸಿದಳು; "ಬಹಳ ದರ್ಪ ತೋರಿಸಿದರು. ಆದರೆ ನನಗೇನು? ನೋಡು, ಇನ್ನು ಸುಮ್ಮಗಾದಾರು. ಇಂತಹ ಪುರುಷ ರಿಗೆ ಇದೇ ಮದ್ದು" ಎಂದಳು.

"ಬೇರೆಯವರಾದರೆ ಏನೆಲ್ಲಾ ಆಗುತ್ತಿತ್ತೊ?"

"ಆಗುವುದೇನು? ಹೇಳಿದ್ದನ್ನು ಕೇಳುವುದು. ನೂರು ವಿವಾಹದ ಸುದ್ದಿಯೆತ್ತುವಾಗಲೂ ನಾಚಿಕೆಯಾಗದವರು ಮನುಷ್ಯರೇ?"

"ಎಷ್ಟು ಹೇಳಿದರೂ ಇಂದಿನ ಹಟ ನಿನ್ನದೆ!"

"ಬೆಂಕಿಯ ಮೇಲೆ ಉಪ್ಪು ಹಾಕಬೇಡ ಪೂರ್ಣಾ!"

"ಸಿಟ್ಟಾಗುವಂತಹ ಯಾವ ಮಾತನ್ನು ನಾನು ನಿನಗೆ ಹೇಳಿದೆ?"

"ಎಲ್ಲಾ ದೋಷ ನನ್ನ ತಲೆಯ ಮೇಲೇ ಹೊರಿಸುವೆ. ಮತ್ತೇನು? ಬೆತ್ತದಿಂದ ಹೊಡೆಯುವುದಿಲ್ಲ. ಎಲ್ಲವನ್ನೂ ತಿಳಿದ ಪುರುಷರಿಗೆ ಏನೂ ಹೇಳುವ ಅಂಶವಿಲ್ಲ. ಊರಲ್ಲಿ ತಿಳಿಯದವರೆಂದರೆ ಸ್ತ್ರೀ ಜಾತಿ ಮಾತ್ರ. ಇಷ್ಟು ಹೊತ್ತು ಕುಳಿತು, ಅವರ ಮಾತನ್ನು ಕೇಳುವಾಗ ಒಮ್ಮೆಯಾದರೂ 'ನೀವು ಮಾಡುವುದು ಅನ್ಯಾಯವೆ'ಂದು ಹೇಳಿದೆಯಾ? ಒಳ್ಳೆಯದಾಯಿತು ಎಂದು ಮನಸ್ಸಿನಲ್ಲಿರುವಾಗ ಹೇಳುವುದೇನು? ಇದರಿಂದ ನಿನಗೆ ಮಾತ್ರ ದುರ್ಗತಿಯಾಗಲಿದೆ." ಎಂದುಬಿಟ್ಟಳು ಸುಮಿತ್ರೆ.

ಸುಮಿತ್ರೆಯ ಕೊನೆಯ ಮಾತು ಬಾಣಕ್ಕಿಂತಲೂ ಹರಿತವಾಗಿತ್ತು. ಪೂರ್ಣೆಯು ಸುಮಿತ್ರೆಯ ಮುಖವನ್ನು ನೋಡತೊಡಗಿದಳು. ಇವಳು ಈ ಮಾತನ್ನು ಆಡಲು ಕಾರಣವೇನು? ಒಂದು ವೇಳೆ ಅವಳಿಗೆ ರಾತ್ರಿಯ ಘಟ ನೆಯು ತಿಳಿದಿದೆಯೆ? ತಿಳಿದಿರಲೇ ಬೇಕು. ಈ ಸಂಶಯದಿಂದ ಮಾತಾಡಿ ದಳು; "ನಿನ್ನ ಮನಸ್ಸಿನಲ್ಲಿರುವ ಸಂಶಯವನ್ನು ಸ್ಪಷ್ಟವಾಗಿ ಹೇಳಿಬಿಡು.

ಅನಾಥೆಯನ್ನುರಿಸಿ ನಿನಗೇನು ಲಾಭ? ನಾನಿಲ್ಲಿರುವುದು ನಿನಗಿಷ್ಟವಿಲ್ಲವಾದರೆ, ಇಂದೇ ನಾನು ಮುಖಕ್ಕೆ ಮಸಿ ಬಳಿದುಕೊಂಡು ಹೊರಡುವೆನು. ಜಗತ್ತಿನಲ್ಲಿ ಎಷ್ಟು ವಿಧವೆಯರಿಲ್ಲ! ಅವರಿಗೆಲ್ಲ ರಕ್ಷಕರಿರುವರೆ? ಯಾವದೇ ರೀತಿಯಲ್ಲಿ ಅವರು ದಿನಗಳೆಯುವುದಿಲ್ಲವೆ? ನಾನೂ ಅವರಂತೆಯೇ ಕಳೆಯುವೆನು. ಎಲ್ಲಿಯೂ ಆಶ್ರಯ ಸಿಗದಿದ್ದರೆ ಗಂಗೆಯು ಎಲ್ಲಿಗೂ ಹೋಗಿಲ್ಲವಷ್ಟೆ?"

ಇದರಿಂದ ಸುಮಿತ್ರೆಯ ಹೃದಯವೇನೂ ತಣಿಯಲಿಲ್ಲ. "ನೀನಿಲ್ಲದಿದ್ದರೆ ನನಗೇಕೆ ಆಗುವುದಿಲ್ಲ? ನೀನು ನನ್ನ ಎದೆಯ ಮೇಲೆ ಕುಳಿತಿರುವೆಯೇನು? ಇದು ನನ್ನ ಮನೆಯಲ್ಲ; ನನ್ನ ಬಾಗಿಲಲ್ಲ. ನಾನು ಇಡುವುದಿಲ್ಲ, ನಾನು ತೆಗೆಯುವುದಿಲ್ಲ. ಮತ್ತೇಕೆ ನನಗಾಗುವುದಿಲ್ಲ? ನಾನು ಎಲ್ಲರ ಕಣ್ಣಿನ ಕಸ" ಎಂದು ಸಿಡುಕಿನಿಂದಲೇ ಹೇಳಿದಳು.

ಪೂರ್ಣೆಯು ಈ ಮಾತುಗಳಿಗೆ ಕಿವಿಗೊಡದೆಯೇ "ನನ್ನ ಗುಡಿಸಲಿಂದ ಹೊರಟುದೇ ತಪ್ಪು. ನನ್ನ ಕಾಲುಗಳಿಗೆ ನಾನೇ ಪರಶುವನ್ನೆಳೆದುಕೊಂಡೆ. ನಾನು ಕಮಲಾಬಾಬು ಹೇಳಿ ಬಂದುದು" ಎಂದಳು.

"ಅದೇ ಬಾಬು ನಿನ್ನನ್ನೇನೂ ಹೇಳಿಲ್ಲವಷ್ಟೆ?"

ಸುಮಿತ್ರೆ ತನ್ನ ಮಾತನ್ನೇನೋ ಮುಗಿಸಿದಳು. ಆದರೆ ಮುಖವು ಇನ್ನೂ ಏನೋ ಹೇಳಬೇಕೆಂಬ ಭಾವದಲ್ಲಿತ್ತು.

"ನನಗೆ ಕಮಲಾಬಾಬುವಿನಷ್ಟೇ ನೀನು ಕೂಡ" ಎನ್ನುತ್ತಾ ಪೂರ್ಣೆಯು ಬಾಗಿಲ ಕಡೆ ಹೋದಳು.

"ಹಾಗಾದರೆ ಹೋಗುವುದೆಲ್ಲಿ? ಸ್ವಲ್ಪ ಕುಳ್ಳಿರು."

"ಕುಳಿತುದಕ್ಕೆ ಪ್ರಸಾದ ದೊರಕಿತು; ಇನ್ನು ಹೋಗಗೊಡು."

ಇಷ್ಟು ಹೇಳಿ ಪೂರ್ಣೆಯು ತನ್ನ ಕೋಣೆಗೆ ಬಂದು ಅಳತೊಡಗಿದಳು. ಅತ್ತ ಸುಮಿತ್ರೆಯು ತನ್ನ ಕೋಣೆಯಲ್ಲಿ ಹಾರ್ಮೋನಿಯಮ್ ಬಾರಿಸಿ ಹಾಡತೊಡಗಿದಳು; "ಊಧೋ ಸಾರಥ ಕಾ ಸಂಸಾರ!"

ಇದು ಸುಮಿತ್ರೆಯ ವಿಜಯಗೀತೆಯಂತೆ ಭಾಸವಾಯಿತು. ಪೂರ್ಣೆಗೆ ಒಂದೊಂದು ಸ್ವರಗಳೂ ಒಂದೊಂದು ಶರಗಳಾದವು. ಇನ್ನು ಈ ಮನೆಯಲ್ಲಿ ಅವಳ ನಿರ್ವಾಹವಾದೀತೆ? ಅಸಂಭವ. ಅವಳೀ ಮನೆಯಲ್ಲಿ ಕಾಲಿಟ್ಟುದೇ ಅಶುಭಮುಹೂರ್ತದಲ್ಲಾಗಿತ್ತು. ತನ್ನ ಗುಡಿಸಲಿನಲ್ಲಿಯೇ ಜೀವನಯಾತ್ರೆಯು ಸಾಗುತ್ತಿದ್ದಿಲ್ಲವೆ? ನೀನು ಆ ಮನೆಗೆ ಹೋಗುವುದು ಹಿತಕರವಲ್ಲವೆಂದು ವೃದ್ಧದಾಸಿಯು ಕಣ್ಣೀರಿಟ್ಟು ಹೇಳಿದ್ದಳು. ಆದರೆ ಹಣೆಯಲ್ಲಿ ಹೀಗೆ ಆಗಬೇಕು ಎಂದು ಬರೆದಿತ್ತು.

ಒಂದು ಬಾರಿ ಕಮಲಾಪ್ರಸಾದನನ್ನು ಕಾಣಬೇಕೆಂದಾಯಿತು. ಅವನೊಡನೆ 'ಈ ಮನೆಯಲ್ಲಿರಲೇ?' ಎಂದು ಕೇಳಬೇಕಾಗಿತ್ತು. ಅವನಲ್ಲಿ ಅಲ್ಲದೆ ಮತ್ತಾರಲ್ಲಿ ಹೇಳುವುದು? ಬದರೀಪ್ರಸಾದರು ಏನೂ ಉತ್ತರ ನೀಯರು.

ರಾತ್ರಿಯ ಕಾಲದಲ್ಲಿ ಕಮಲಾಪ್ರಸಾದನನ್ನು ಕಾಣಬೇಕಷ್ಟೆ. ಆದರೆ ಆ ಕಾಲದಲ್ಲಿ ಅವನನ್ನು ಕಾಣುವುದುಚಿತವೆ? ಉಚಿತಾನುಚಿತಕ್ಕೇನು? ಅವನನ್ನು ಬಾಗಿಲಲ್ಲೇ ಕಂಡು, 'ನನ್ನನ್ನಿಲ್ಲಿಂದ ಹೋಗಗೊಡಿರಿ' ಎಂದರಾಯಿತಲ್ಲ?

ದಿನವಿಡೀ ಇದೇ ಯೋಚನೆಯಲ್ಲಿ ಕಳೆಯಿತು. ಎಲ್ಲರೂ ಮಲಗಿದ ಕಾಲದಲ್ಲಿ ಪೂರ್ಣೆಯು ಮೆಲ್ಲನೆ ಕಮಲಾಪ್ರಸಾದನ ಕೋಣೆಯ ಕಡೆ ಹೋಗಿ ಮೃದುವಾಗಿ ಕರೆದಳು. ಅವನು ಆಗ ಸಿನೆಮಾದಿಂದ ಬಂದಿದ್ದನಷ್ಟೆ. ಕರೆ ಕೇಳಿದೊಡನೆಯೇ ಹಾರಿಬಿದ್ದು ಬಾಗಿಲನ್ನು ತೆರೆದನು. "ಒಳಗೆ ಬಾ. ನಿನ್ನನ್ನು ನೋಡಬೇಕೆಂದು ತವಕಗೊಂಡಿದ್ದೆ" ಎಂದನು.

ಪೂರ್ಣೆಯು ಬಾಗಿಲಲ್ಲೇ ನಿಂತುಕೊಂಡು "ಅಲ್ಲಿಗೆ ಬರುವಂತಹ ಕೆಲಸವೇನೂ ಇಲ್ಲ. ನಾನು ಇಲ್ಲಿಂದ ಹೋಗುವೆನೆನ್ನುವುದಕ್ಕೆ ಮಾತ್ರ ಬಂದೆ. ಇನ್ನು ನಾನು ಈ ಮನೆಯಲ್ಲಿ ನಿಲ್ಲುವಂತಿಲ್ಲ" ಎಂದಳು.

ಕಮಲಾಪ್ರಸಾದನು ಬಾಗಿಲ ಬಳಿ ಬಂದು, "ಆಗಲಿ, ನೀನು ಒಳಗೆ ಬರಬಹುದು. ಸ್ವಲ್ಪ ಕುಳಿತುಕೊಂಡು ಯಾವುದಕ್ಕಾಗಿ ನೀನು ಹೋಗಬೇಕಾಗಿದೆಯೆಂದು ಹೇಳಬಹುದಲ್ಲ?" ಎಂದು ಹೇಳತೊಡಗಿದನು.

"ಉಹುಂ, ನಾನು ಒಳಬರುವಂತಿಲ್ಲ. ಮೊದಲೇ ಗುಲ್ಲೆದ್ದಿದೆ."

"ಯಾರು ಗುಲ್ಲೆಬ್ಬಿಸಿದವರು? ಸುಮಿತ್ರೆಯೇನು?"

"ಯಾರೇ ಆಗಲಿ. ನೀವು ಕೇಳುವುದು, ನಾನು ಹೇಳುವುದು ವ್ಯರ್ಥ. ಅಂತಹ ವರ್ತನೆಗಳಾದರೆ ಯಾರೂ ಹೇಳುವುದೇ. ಯಾರ ಬಾಯನ್ನು ಮುಚ್ಚಲೂ ನಿಮಗೆ ಸಾಧ್ಯವಿಲ್ಲ. ಇದರಿಂದೆಲ್ಲಾ ಒಳ್ಳೆಯದು, ನಾನಿಲ್ಲಿಂದ ಹೋಗುವುದು. ನೀವಿಷ್ಟು ದಿನ ನನ್ನನ್ನು ರಕ್ಷಿಸಿದಿರಿ. ಅದಕ್ಕೆ ನಾನೇನೂ ಮಾಡಲಾರೆ."

"ಎಲ್ಲಿಗೆ ಹೋಗುವೆ?"

"ಎಲ್ಲಿಯಾದರೂ ಆಶ್ರಯ ಸಿಕ್ಕಿದಲ್ಲಿಗೆ. ಎಲ್ಲಿಯೂ ಸಿಗದಿದ್ದರೆ ಗಂಗೆಯ ಮಡಿಲಿಗೆ!"

"ಹಾಗಾದರೆ, ಮೊದಲು ನನಗಿಷ್ಟು ವಿಷ ತಿನ್ನಿಸಿ ಹೋಗಿಬಿಡು."

ಪೂರ್ಣೆ- ತಿರಸ್ಕಾರಭಾವದಿಂದ ನೋಡುತ್ತಾ "ಎಂತಹ ಮಾತುಗಳ ನ್ನಾಡುತ್ತಿರುವಿರಿ? ನಿಮ್ಮ ಕೆಲಸಕ್ಕಾಗಿ ನನ್ನ ಪ್ರಾಣವು ಬೇಕಾಗಿದ್ದರೆ, ಅದಕ್ಕೆ ನಾನು ಸಿದ್ಧ. ಆದರೆ ಈಗಲೇ ಮಾತು ಬೆಳೆಯಿತು. ಇನ್ನು ಎಷ್ಟು ಬೆಳೆ ಯುವುದೋ? ಆದುದರಿಂದ ಇಲ್ಲಿಯೇ ನಿಲ್ಲಿಸುವೆನು." ಎಂದು ಹೊರಡ ಲನುವಾದಳು.

ಕಮಲಾಪ್ರಸಾದನು ಬಲಾತ್ಕಾರದಿಂದ ಪೂರ್ಣೆಯ ಕೈಹಿಡಿದು ಒಳ ಗೆಳೆದು ಬಾಗಿಲನ್ನು ಬಿಗಿದನು. "ಹೇಳು, ಸುಮಿತ್ರೆಯು ಏನಾದರೂ ಹೇಳಿದಳೆ?" ಎಂದು ಪ್ರಶ್ನಿಸಿದನು.

ಪೂರ್ಣೆಯು ಬಾಗಿಲಿಗೆ ಅಂಟಿಕೊಂಡು ನಿಂತು "ಮೊದಲು ಬಾಗಿಲು ತೆರೆದರೆ ಹೇಳುವೆನು. ನನ್ನ ಜೀವನವನ್ನು ವ್ಯರ್ಥವಾಗಿ ಹಾಳುಮಾಡುವು ದೇಕೆ?" ಎಂದಳು.

"ತೆರೆಯುವೆ, ಅಷ್ಟೇನು ಅವಸರ? ನಾನೇನೂ ಭೂತವಲ್ಲ. ಅಲ್ಲ, ನಡುಗುವುದಕ್ಕೆ ನೀನೇನು ನೀರಿಂದ ಒದ್ದೆಯಾಗಿರುವೆಯಾ? ದೇವರಾಣೆ, ಸುಮಿತ್ರೆಯು ನಿನಗೇನಾದರೂ ಹೇಳಿರುವಳಾದರೆ, ಅವಳನ್ನು ನಾಳೆಯೇ ಮನೆಯಿಂದ ಹೊರಡಿಸುವೆ. ನೋಡು, ನೀನೇ ಬಾಗಿಲು ತೆರೆದರೆ ಪಶ್ಚಾ ತ್ತಾಪಪಡುವೆ. ಎದೆಗೆ ಚೂರಿಯಿಂದಿರಿದುಕೊಂಡೇನು! ನಿಜವಾಗಿ ಇರಿದು ಕೊಂಡೇನು! ನಿನ್ನನ್ನು ಮೊದಲು ನೋಡಿ, ತಿಂಗಳಾರು ಸಂದಿತು. ಅಂದಿ ನಿಂದ ನನ್ನ ವ್ಯಾಕುಲವು ಹೆಚ್ಚುತ್ತಾ ಬಂದಿದೆ. ಅದು ನಿನಗೇನು ಗೊತ್ತು? ಇಷ್ಟು ಕಾಲದ ವರೆಗೆ ಹೇಗೋ ಸಹಿಸಿಕೊಂಡೆ. ಆದರೆ ಇನ್ನು ಸಹಿಸಲಾರೆ. ನೀನು ಇಲ್ಲಿಂದ ಹೋಗುವುದಲ್ಲ, ನನ್ನ ಪ್ರಾಣವೇ ಹೋಗುವುದೆಂದು ತಿಳಿ. ನಾನೇನೂ ನಿನ್ನನ್ನು ತಡೆಯುವುದಿಲ್ಲ. ತಡೆಯುವ ಅಧಿಕಾರವಾದರೂ ನನ ಗೆಲ್ಲಿಂದ? ಪ್ರಪಂಚವು ವಿವಾಹದ ಮೂಲಕ ಯಾವ ಅಧಿಕಾರವನ್ನೂ ಕೊಡು ತ್ತದೆ! ಆದರೆ ಪ್ರೇಮದ ಅಧಿಕಾರವು ಕಾಲಿನಷ್ಟು ಕೂಡ ಸಿಗುವುದಿಲ್ಲ. ಹೋಗು, ಹೋದರೆ ನಾಳೆ ನೀನು 'ಕಮಲಾಪ್ರಸಾದನು ಈ ಪ್ರಪಂಚದಿಂದ ನಡೆದುಬಿಟ್ಟ' ಎಂದು ಕೇಳಲಿದೆ."

ಪೂರ್ಣೆಯ ಹೃದಯವು ಈ ಪ್ರೇಮಪ್ರದರ್ಶನದಿಂದ ಉಯ್ಯಾಲೆ ಯಾಡತೊಡಗಿತು. ಒಂದು ಕೈ ಬಾಗಿಲಿನ ಚಿಲಕದಲ್ಲಿತ್ತು. ಅದು ತನ್ನಷ್ಟಕ್ಕೇ ಜಾರಿತು. ಒಂದು ಹಜ್ಜೆ ಮುಂದುವರಿದಳು. ಮಗು ಜಾರಿ ಬಿದ್ದು ಒದ್ದಾಡುವಾಗ, ಅದರ ವೇದನೆಯನ್ನು ನೋಡಲಾರದೆ, ಅದರ ಬಳಿ ಓಡಿ ಎತ್ತಿಕೊಳ್ಳುವವರಂತಾಯಿತು ಅವಳ ಸ್ಥಿತಿ. ಕಮಲಾಪ್ರಸಾದನು ಸೀರೆ

ತಂದಂದಿನಿಂದಲೇ ಅವಳಿಗೀ ಶಂಕೆಯುಂಟಾಗಿತ್ತು. ಅದು ಪುರುಷರ ವಿನೋದವಾಗಿರಬೇಕೆಂದು ಗ್ರಹಿಸಿಕೊಂಡಿದ್ದಳು. ಈಗ ಈ ಪ್ರೇಮಾಲಾಪವನ್ನು ಕೇಳಿ ಭಯಭೀತೆಯಾದಳು. ಗಾಬರಿಯ ಧ್ವನಿಯಿಂದ "ಇಂತಹ ಮಾತುಗಳನ್ನಾಡಬೇಡಿರಿ. ನಾನು ಎಲ್ಲಿಯಾದರೂ ಜೀವಿಸಿಕೊಳ್ಳುವೆನು. ಆಗಾಗ ಬರುವೆನು. ಈಗ ನನ್ನನ್ನು ಹೋಗಗೊಡಿರಿ. ನನ್ನ ಅಪಕೀರ್ತಿಯಿಂದ ನಿಮಗೆ ಸಂತೋಷವೇನು?" ಎಂದಳು.

"ಕೀರ್ತಿ ಅಪಕೀರ್ತಿಗಳು ಬರಿಯ ನಟನೆ. ಪ್ರೇಮವೆಂದರೆ ಈಶ್ವರ ಪ್ರೇರಣೆ. ಅದನ್ನು ಸ್ವೀಕರಿಸುವದು ಪಾಪವಲ್ಲ. ಅನಾದರಣೆಯೇ ಪಾಪ. ನನಗೆ ದುಡ್ಡಿನ ಬಲವಿದೆ. ಅದರಿಂದ ರೂಪವತಿಯರನ್ನು, ನನ್ನ ಐಚ್ಛಿಕ ಸ್ತ್ರೀಯರನ್ನು ವಶಪಡಿಸಿಕೊಳ್ಳುವುದು ಕಷ್ಟವಲ್ಲ. ಆದರೆ ಇಂದಿನ ವರೆಗೆ ಯಾವ ಸ್ತ್ರೀಯನ್ನೂ ನಾನು ಇಚ್ಛಿಸಿದುದಿಲ್ಲ. ಸುಮಿತ್ರೆಯು ಬಂದು ಮೂರು ವರ್ಷಗಳಾದರೂ ಇಂದಿನ ವರೆಗೆ ನಾನು ಅವಳನ್ನು ಪ್ರೇಮದೃಷ್ಟಿಯಿಂದ ನೋಡಿದ್ದಿಲ್ಲ. ಅದೇಕೋ ನಿನ್ನ ಮೇಲೆ ನನ್ನ ದೃಷ್ಟಿಯಿದೆ. ನೀನು ಎಷ್ಟೋ ದಿನಗಳಿಂದ ನನ್ನ ಹೃದಯಮಂದಿರದಲ್ಲಿ ಕುಳ್ಳಿರುವೆಯೆಂದು ಭಾಸವಾಯಿತು. ನನ್ನ ಅಜ್ಞಾನದಿಂದ ನನ್ನ ಮನೋವೇದನೆಯ ಅರಿವಾಗಲಿಲ್ಲ. ನಿನ್ನನ್ನು ಮರೆಯಬೇಕೆಂದು ನಾನೆಣಿಸಿಕೊಳ್ಳುವೆನು. ಆದರೆ ನನ್ನ ವಶ ಯಾವುದೂ ಇಲ್ಲ. ನನ್ನ ಜೀವನವೇ ನಿನ್ನನ್ನು ಹೊಂದಿಕೊಂಡಿದೆಯೆಂದು ತಿಳಿದುಕೊಂಡರೆ ಸಾಕು."

ಪೂರ್ಣೆಯು ಪಾಷಾಣಪ್ರತಿಮೆಯಂತೆ ನಿಂತುಕೊಂಡಿದ್ದಳು. ಅವಳ ಬುದ್ಧಿ, ಚೇತನ, ಆತ್ಮಗಳು ಯಾವುದೋ ಪ್ರವಾಹದ ತೆರೆಗಳ ಮೇಲೆ ತೇಲಿ ಹೋಗುತ್ತಿದ್ದುವು. ಆರ್ತ್ತಧ್ವನಿಯು ಯಾರಿಗೂ ಕೇಳುತ್ತಿದ್ದಿಲ್ಲ. ಮನುಷ್ಯರು, ಪಶುಪಕ್ಷಿಗಳು, ದಡದ ವೃಕ್ಷಗಳು, ಮನೆಗಳು, ಎಲ್ಲವೂ ಅವುಗಳಿಂದ ಎಷ್ಟೋ ದೂರ ಓಡಿಹೋಗುತ್ತಿದ್ದುವು. ಅವಳಿಂದ ನಿಂತುಕೊಳ್ಳುವುದಕ್ಕಾಗಲಿಲ್ಲ. ನೆಲದ ಮೇಲೆ ಕುಸಿದುಕುಳಿತು ಬಿಕ್ಕಿ ಬಿಕ್ಕಿ ಅಳತೊಡಗಿದಳು.

ಕಮಲಾಪ್ರಸಾದನು ಅವಳ ಬಳಿ ಹೋಗಿ, ಕೈಗಳನ್ನು ಹಿಡಿದುಕೊಂಡನು. "ನೀನು ಯಾವ ಸಂಕಟದಲ್ಲಿರುವೆಯೆಂದು ನನಗೆ ಗೊತ್ತಿದೆ. ನಿನ್ನ ಆದರ್ಶ ಪತಿಭಕ್ತಿಯು ನನಗರಿಯದೆ? ನಿನಗೆ ಅವನಲ್ಲಿ ಎಷ್ಟು ಪ್ರೀತಿಯಿತ್ತು? ಅವನಿಗೆ ನಿನ್ನಲ್ಲೆಷ್ಟು ಪ್ರೇಮವಿತ್ತು? ಎಂಬುದೆಲ್ಲಾ ನನಗೆ ಗೊತ್ತಿದೆ. ಯಾವಾಗಲೂ ಅವನು ಪಾರ್ಕಿನಲ್ಲಿ ನನ್ನೆದುರಲ್ಲಿ ನಿನ್ನ ಗುಣಗಾನವನ್ನು ಹಾಡುತ್ತಿದ್ದ. ಅದನ್ನು ಕೇಳಿ ಅವನ ಭಾಗ್ಯವನ್ನು ನಾನು ಕೊಂಡಾಡುತ್ತಿದ್ದೆ.

ಒಮ್ಮೆ ನಿನ್ನನ್ನು ಕಂಡು ನಿನ್ನ ಚರಣಕಮಲಗಳಿಗೆ ಮಣಿಯಬೇಕು ಎಂ
ಕೊಳ್ಳುತ್ತಿದ್ದೆ. ಸುಮಿತ್ರೆಯಲ್ಲಿ ಬೇಸರ ವೃದ್ಧಿಯಾಗುತ್ತಿತ್ತು. ಅವ
ಅಂದು ಬಿತ್ತಿದ ಬೀಜವು ಇಂದು ಫಲಿಸಿತು." ಎಂದು ಕಮಲಾಪ್ರಸಾದ
ಹೇಳಿದನು.

ಪೂರ್ಣಾ "ಸ್ವಾಮಿ, ನಿಮ್ಮ ಕಾಲಿಗೆ ಬೀಳುವೆನು. ನನ್ನನ್ನು ಹೊ
ಗೊಡಿರಿ. ಅದೇಕೋ ನನ್ನ ಮನಸ್ಸು ಗಲಿಬಿಲಿಯಲ್ಲಿದೆ" ಎಂದಳು.

"ಪುನಃ ಅದೇ ಮಾತಲ್ಲ? ಹೋಗು. ಇನ್ನು ಒಮ್ಮೆಯೂ ನಿನ್ನ
ನಿಲ್ಲಲು ಒತ್ತಾಯಿಸುವುದಿಲ್ಲ."

ಪೂರ್ಣೆಯು ಕುಳಿತುಕೊಂಡೇ ಇದ್ದಳು. ಅವಳಿಗೆ ಯಾವುದ
ಭೀಷಣ ಸಂಕಟದ ಶಂಕೆಯುಂಟಾಯಿತು.

"ಯಾಕೆ ಹೋಗುವುದಿಲ್ಲ? ನಾನು ನಿನ್ನನ್ನು ಬಂಧಿಸಲಿಲ್ಲವಲ್ಲ
ಎಂದು ಪುನಃ ಕಮಲಾಪ್ರಸಾದನೆಂದನು.

ಪೂರ್ಣೆಯು ಕಮಲಾಪ್ರಸಾದನನ್ನು ಕಾತರದೃಷ್ಟಿಯಿಂದ ನೋಡು
"ಪ್ರಾಣವನ್ನು ಕಳೆದುಕೊಳ್ಳಲಾರೆ ಎಂದು ಮಾತು ಕೊಡುವಿರಾ?" ಎಂ
ಕೇಳಿದಳು.

ಕಮಲಾಪ್ರಸಾದನು ಉದಾಸೀನಭಾವದಿಂದ "ನಿನಗೆ ನನ್ನ ಪ್ರಾ
ಸುದ್ದಿಯೇಕೆ? ನಿನ್ನ ಮೇಲೆ ನನ್ನ ಅಧಿಕಾರವಿಲ್ಲದಂತೆಯೇ ನನ್ನ ಮೇ
ನಿನ್ನ ಅಧಿಕಾರವಿರಕೂಡದು. ಇಲ್ಲವಾದರೆ ನನ್ನ ಅಸುವನ್ನು ತೆ
ದೇನು. ಆದರೆ ಅದೆಲ್ಲಾ ನಿನಗೇಕೆ? ನಿನ್ನನ್ನು ನಾನೇನೂ ನಿಂದಿಸುವುದಿ
ಎಂದನು.

"ಆ ರೀತಿಯಾದರೆ ನಾನು ಹೋಗುವುದೂ ಇಲ್ಲ."

"ಅಂದರೆ ನೀನು ನನ್ನನ್ನು ಜೀವಿಸಲೂ ಬಿಡುವುದಿಲ್ಲ; ಸಾಯ
ಬಿಡುವುದಿಲ್ಲ. ನಾನು ಯಾವಾಗಲೂ ಮುಳ್ಳುಹಾಸಿಗೆಯಲ್ಲಿರಬೇಕೆಂ
ನಿನ್ನಿಚ್ಛೆಯೆ? ಇದನ್ನು ನನ್ನಿಂದ ಸಹಿಸಲು ಸಾಧ್ಯವಿಲ್ಲ. ನೀನು ನನ್ನ ಪ್ರಾ
ವನ್ನು ರಕ್ಷಿಸುವುದಾದರೆ ನನ್ನ ಪ್ರಾಣಕ್ಕೆ ತೊಂದರೆಯಿಲ್ಲವೆಂದು ಮಾ
ಕೊಟ್ಟೇನು."

"ಹಾಗೆ ನಾನೊಪ್ಪಲಾರೆ."

"ಹಾಗಾದರೆ ಕಮಲಾಪ್ರಸಾದನೆಂದಿಗೂ ವಿರಹವೇದನೆಯನ್ನು ಸಹಿ
ಲಾರ."

"ನೀವು ನನ್ನನ್ನು ಬಹಳ ಸಂಕಟಕ್ಕೆ ಗುರಿಮಾಡುವಿರಿ. ನನ್ನ ಸ

ನಾಶ ಮಾಡಬೇಕೆಂದೆಣಿಸಿರುವಿರಿ. ನನ್ನ ಕರ್ತವ್ಯಜ್ಞಾನವು ನಷ್ಟವಾಗುತ್ತಿದೆ. ನನ್ನ ಮೇಲೆ ಮೋಹಿನೀಮಂತ್ರವನ್ನು ಪ್ರಯೋಗಿಸುತ್ತಿರುವಿರಿ."

ಪೂರ್ಣೆಯ ಸ್ವರವು ಕರುಣಾಪೂರ್ಣವಾಗಿತ್ತು.

ಕಮಲಾಪ್ರಸಾದನು ಆವೇಶಗೊಂಡು ಮಾತಾಡತೊಡಗಿದನು; "ಸುಮ್ಮನಾಗು ಪೂರ್ಣಾ. ಇಂತಹ ಮಾತುಗಳು ನನಗೆ ಮಾನಸಿಕ ಕಷ್ಟವನ್ನು ಕೊಡುತ್ತವೆ. ನನ್ನ ನೀಚ ವಾಸನಾತೃಪ್ತಿಗಾಗಿ, ನಿನ್ನ ಮೇಲೆ ಮಾಯಾಜಾಲವನ್ನು ಹರಡುತ್ತಿರುವೆನೆಂದು ತಿಳಿದಿರುವೆಯಾ? ಇದು ಮಾಯಾಜಾಲವಲ್ಲ. ಶುದ್ಧ ಆತ್ಮಸಮರ್ಪಣ. ಇದರ ಪ್ರಮಾಣವು ನಿನಗೆ ಬೇಕಾದರೆ, ಇದೋ – –" ಎಂದು ಹೇಳುತ್ತಾ ಗೂಟದಿಂದ ತೂಗುತ್ತಿದ್ದ ಕಠಾರಿಯೊಂದನ್ನು ತೆಗೆದುಕೊಂಡು, "ನನ್ನ ಕಳೇಬರವು ಎದುರಲ್ಲಿ ಬಿದ್ದ ಮೇಲಾದರೂ ಕೌಶಲ್ಯವಲ್ಲವೆಂದು ನಿನಗೆ ಖಚಿತವಾದೀತಲ್ಲ?" ಎಂದನು.

ಇನ್ನೂ ಒಂದು ಕ್ಷಣ ಪೂರ್ಣೆಯು ಕುಳಿತಿರುತ್ತಿದ್ದರೆ ಇದು ಮಾಯಾಜಾಲವೇ, ಅಥವಾ ಆತ್ಮಸಮರ್ಪಣವೇ ಎಂದು ತಿಳಿಯುತ್ತಿತ್ತು. ಆದರೆ ರಮಣಿಯ ಕಾತರಹೃದಯವು ಕೇಳಲಿಲ್ಲ. ಇದನ್ನರಿತೇ ಕಮಲಾಪ್ರಸಾದನು ಈ ಅಭಿನಯಕ್ಕೆ ತೊಡಗಿದ್ದನು. ಪೂರ್ಣೆಯು ಕತ್ತಿಯನ್ನು ಅವನ ಕೈಯಿಂದ ಎಳೆದು ತೆಗೆದು, "ನಿಮ್ಮೊಡನೆ ನಾನು ಯಾವ ಪ್ರಮಾಣವನ್ನೂ ಕೇಳುವುದಿಲ್ಲ" ಎಂದಳು.

"ಮಾಯಾಜಾಲವೆಂದೆಯೇಕೆ?"

"ಕ್ಷಮೆ ಕೊಡಬೇಕು."

"ನಿನಗೆ ಸಂದೇಹವಿದ್ದರೆ ಅದನ್ನು ನಾನು ನಿವೃತ್ತಿಪಡಿಸುವೆನು. ತನ್ನ ಪ್ರೇಯಸಿಯ ಮುಂದೆ, ಪ್ರೇಮದ ಸತ್ಯತೆಯನ್ನು ಪ್ರಕಾಶಿಸುತ್ತಾ ಮೃತ್ಯುವನ್ನು ಆಲಿಂಗಿಸುವಂತಹ ಸಂದರ್ಭವು ಬೇರೆ ದೊರಕೀತೆ?"

"ಇದೇ ಕತ್ತಿಯಿಂದ ನನ್ನನ್ನಿಲ್ಲದಂತೆ ಮಾಡಿದರೆ ಎಷ್ಟೋ ಕ್ಷೇಮವಾಗುತ್ತಿತ್ತು. ಏನೂ ಹಿಂದುಮುಂದು ನೋಡದೆ, ತಲೆತಗ್ಗಿಸಿ, ಮೃತ್ಯುವನ್ನು ಸ್ವಾಗತಿಸುತ್ತಿದ್ದೆ."

ಈ ಮಾತು ಅವನ ಕುಟಿಲಹೃದಯಕ್ಕೂ ನಾಟಿತು. ತನ್ನ ನೀಚತೆಗಾಗಿ ಒಮ್ಮೆ ಗ್ಲಾನಿಯುಂಟಾಯಿತು. ಅವನ ಧ್ವನಿಯು ಗದ್ಗದಿತವಾಯಿತು; "ವಿಧಾತನು ನನ್ನ ಭಾಗ್ಯದಲ್ಲಿ ನಿನ್ನನ್ನು ಕೊಲ್ಲುವಂತೆ ಬರೆದಿದ್ದರೂ, ನಿನ್ನನ್ನು ಕೊಂದರೆ ತ್ರೈಲೋಕ್ಯದ ರತ್ನಸಿಂಹಾಸನವು ದೊರೆಯುವುದಿದ್ದರೂ, ಸ್ವರ್ಗದ ಅಪ್ಸರೆಯರು ನನ್ನ ದಾಸಿಯರಾದರೂ, ನಿನ್ನ ಪವಿತ್ರದೇಹದಿಂದ ಒಂದು

ಬಿಂದು ರಕ್ತವನ್ನೂ ತೆಗೆಯಲಾರೆ. ನನ್ನ ಆತ್ಮವು ಕಲುಷಿತವಾಗುವುದಾದರು ನನ್ನ ಕೈಯು ಖಡ್ಗವನ್ನೆತ್ತಲಾರದು. ನನ್ನ ಎದೆಯನ್ನೊಮ್ಮೆ ಮು ನೋಡು. ಎಂತಹ ತಳಮಳವಿದೆಯೆಂದು ಆಗ ತಿಳಿದೀತು. ಪೂರ್ಣಾ ಅಗೊ, ಅಲ್ಲಿ ವೀಳ್ಯದೆಲೆಯಿದೆ. ಒಂದು ಬೀಡವನ್ನು ತಯಾರಿಸಿ ಕೊ ಲಾರೆಯಾ? ಇದರಿಂದಲೇ ನನ್ನೆದೆಯನ್ನು ಶಾಂತಪಡಿಸಿಕೊಳ್ಳುವೆನು."

ಪೂರ್ಣೆಯು ಒಂದೆರಡು ಬೀಡಗಳನ್ನು ತಯಾರಿಸಿ, ಅವನಿಗೆ ಕೊಡ ಕೈಚಾಚಿದಳು. ಕಮಲಾಪ್ರಸಾದನು ಅದನ್ನು ತೆಗೆದುಕೊಂಡು, 'ಭೋಜನ ನಂತರ ದಕ್ಷಿಣೆ ಬೇಡವೆ?" ಎಂದು ಕೇಳಿದನು.

ಪೂರ್ಣೆಯು ವಿನೋದ ಮಾಡುತ್ತಾ "ಪ್ರೇಮ ಇದ್ದರೆ ದಕ್ಷಿಣೆ ಸಿ ತ್ತಿತ್ತು" ಎಂದು ಉತ್ತರವಿತ್ತಳು.

"ನನ್ನ ದಕ್ಷಿಣೆಯೆಂದರೆ, ಈ ಬೀಡವನ್ನು ನೀನು ತಿನ್ನಬೇಕು."

"ಇಂತಹ ದಕ್ಷಿಣೆಯನ್ನು ನಾನು ತೆಗೆದುಕೊಳ್ಳಲಾರೆ. ನೀವು ಕೊಡು ಬೀಡದಲ್ಲೇನಾದರೂ ಮೋಹಿನೀಮಂತ್ರವಿರಬೇಕು. ಪುರುಷರು ಆ ವಿ ಯಲ್ಲಿ ನಿಪುಣರೇ! ನಾನು ಇಲ್ಲಿ ಬಾಗಿಲಲ್ಲಿ ನಿಂತುಕೊಂಡೇ ನಿಮ್ಮೊಡ ಮಾತಾಡಿ ಹೋಗಬೇಕೆಂದು ಮಾಡಿದ್ದೆ. ಆದರೆ, ನಿಮ್ಮ ಮಾಂತ್ರಿಕಬ ದಿಂದಲೇ ಇಷ್ಟು ಸಮಯ ನಿಲ್ಲುವಂತಾಯಿತು."

ಕಮಲಾಪ್ರಸಾದನು "ನನ್ನ ಕೈಯಿಂದಲೇ ತಿನ್ನಿಸಿದರೆ?" ಎನ್ನುತ ತನ್ನ ಕೈಯನ್ನು ಅವಳ ಬಾಯಿಯ ಸಮೀಪ ಕೊಂಡುಹೋದನು.

"ನನ್ನ ಕೈಯಲ್ಲೇ ಕೊಡಿರಿ."

"ಅದಾಗದು."

"ಮತ್ತೇನೂ ಒತ್ತಾಯವಿಲ್ಲವಷ್ಟೆ?"

ಪೂರ್ಣೆಯು ಬಾಯಿ ತೆರೆದಳು. ಕಮಲಾಪ್ರಸಾದನು ಬೀಡವನ ತಿನ್ನಿಸಿದನು. ಹಾಸಿಗೆಯಲ್ಲಿ ಕುಳಿತುಕೊಂಡು, "ನೀನಿಲ್ಲಿಂದ ಹೋಗು ನೆನ್ನಬಾರದು. ಈ ಮನೆ ನಿನ್ನದು; ನಾನು ನಿನ್ನ ದಾಸ" ಎಂದನು.

ಪೂರ್ಣೆಯು ಒಂದು ಕ್ಷಣ ಆಲೋಚಿಸುತ್ತಾ ಇದ್ದಳು. ಬಳಿ "ಇದರ ಪರಿಣಾಮವೇನಾದೀತೋ, ನನಗೆ ತಿಳಿಯುವುದಿಲ್ಲ. ಕಳ್ಳಾಟಿಕೆಯ ಎಲ್ಲಿಯ ವರೆಗೆ ನಡೆದೀತು? ಒಂದು ದಿನ ಗುಟ್ಟು ರಟ್ಟಾದೀತು. ಆ ನೀವೂ ನಾನೂ ಬೇರಾಗಲಿದೆ." ಎಂದು ಕ್ಷೀಣಸ್ವರದಿಂದ ಹೇಳಿದಳು.

"ಅಂತಹ ಶಂಕೆಗಳನ್ನೆಣಿಸಬೇಡ, ಪೂರ್ಣಾ. ಅದಕ್ಕೂ ನಿವೃತ್ತಿಗಳಿ

ದಿಲ್ಲ. ನೀನೂ ನಾನೂ ವಿವಾಹದ ಸಂಕೋಲೆಗಳನ್ನು ಬಿಗಿದುಕೊಂಡರೆ ಬೇರಾಗಲಿದೆಯೆ?"

"ಇದೇನು ಮಾತಾಡುತ್ತಿರುವಿರಿ? ಈ ಮಾತಿಗೆ ಪ್ರಪಂಚವು ಒಪ್ಪೀತೆ? ಶಾಸ್ತ್ರಿಗಳು ಒಪ್ಪುವರೆ?"

"ವಿವಾಹಕ್ಕೆ ಯಾರು ಒಪ್ಪುವುದೂ ಬೇಡ. ಪ್ರಪಂಚವು ಒಂದು ಬದಿಯಲ್ಲಿ ಬಿದ್ದಿರಲಿ. ಶಾಸ್ತ್ರಿಗಳು ಶಾಸ್ತ್ರದ ಕಂತೆಯಲ್ಲೇ ಮುಳುಗಿರಲಿ. ಆರೂ ಇಲ್ಲದೆ ನಾವೇ ಗಾಂಧರ್ವವಿಧಿಯಿಂದ ಬಂಧಿತರಾಗಬಾರದೇಕೆ?"

"ಈಗಲೂ ಗಾಂಧರ್ವವಿವಾಹವು ರೂಢಿಯಲ್ಲಿದೆಯೆ?"

"ಹೂಂ, ಯುರೋಪಿನಲ್ಲಿ ಬಹಳ! ಮುಸಲ್ಮಾನರಲ್ಲಿಯೂ ಇದೆ. ಈ ದೇಶದಲ್ಲಿ ಪೂರ್ವಕಾಲದಲ್ಲಿತ್ತು. ಇನ್ನು ಅದನ್ನು ಈ ಊರಲ್ಲಿಯೂ ಕಾನೂನಿನ ಮುಖಾಂತರ ವ್ಯವಹಾರಕ್ಕೆ ತರುವರು."

"ಈ ಮದುವೆಯ ರೀತಿ ಹೇಗೆ?"

"ಕ್ರಮ ಮತ್ತೇನೂ ಇಲ್ಲ. ಸ್ತ್ರೀ ಪುರುಷರಿಬ್ಬರೂ ವಚನದಿಂದ ಬಂಧಿತರಾದರೆ ಮುಗಿಯಿತು. ಮಾತಾಪಿತೃಗಳು, ಬಂಧು ಬಳಗ, ಪಂಡಿತ ಪುರೋಹಿತರು ಯಾರೂ ಅಗತ್ಯವಿಲ್ಲ."

"ಇಸ್ಸಿ, ಇದೇತರ ವಿವಾಹ? ಮಕ್ಕಳಾಟವೆ?"

"ನೀನಾವುದನ್ನು ವಿವಾಹವೆನ್ನುವೆಯೋ, ಅದನ್ನು ನಾನು ಮಕ್ಕಳಾಟವೆಂದು ತಿಳಿಯುತ್ತೇನೆ. ಏನೂ ತಿಳಿಯದ ಬಾಲರಿಬ್ಬರನ್ನು ಆಮರಣ ಪರ್ಯಂತ ವಿವಾಹರಜ್ಜುವಿನಿಂದ ಬಂಧಿಸುವುದೆ? ಕುರುಡು ಆಚಾರಗಳ ಆಟವಲ್ಲವೆ ಇದು?"

"ಪ್ರಪಂಚವು ಇಂತಹ ವಿವಾಹವನ್ನೇ ಒಪ್ಪುವುದಷ್ಟೆ?"

"ಪ್ರಪಂಚವು ಕುರುಡು. ಅದರ ವ್ಯವಹಾರವು ತಿರುಗುಮುರುಗು. ಇಂತಹ ಪ್ರಪಂಚವನ್ನು ನಾನೊಪ್ಪಲಾರೆ. ಮನುಷ್ಯನು ಆಜೀವವೂ ದುಃಖದಿಂದಲೇ ಜೀವನಯಾತ್ರೆಯನ್ನು ಮಾಡಬೇಕೆಂದು ಪ್ರಪಂಚದ ಇಚ್ಛೆ. ಆದರೆ ಪರಮಾತ್ಮನು ಮನುಷ್ಯರನ್ನು ಸೃಷ್ಟಿಸಿದ್ದು ಅದಕ್ಕಾಗಿಯಲ್ಲ. ಅವನ ಸಂತಾನವು ಅಳುತ್ತಿರುವುದು ಅವನಿಗಿಷ್ಟವೆ? ನಮ್ಮ ಜೀವನವನ್ನು ಅಂಧ ಪರಂಪರೆಗೆ ಬಲಿಕೊಡಬೇಕೇಕೆ? ಈ ಮನೆಯಿಂದು ಜರಿದುಹೋದರೆ, ಅದನ್ನು ದೈವಪ್ರೇರಣೆಯೆಂದು ತಿಳಿದು ಅಂತೆಯೇ ಬಿಡುವೆವೆ? ಅದನ್ನು ನಾಳೆಯೇ ಸರಿಪಡಿಸುವುದಿಲ್ಲವೆ? ಹಾಗೆಯೇ ಅಬಲೆಯೋರ್ವಳ ಆಶಾಮಂದಿರವು ಜರಿದುಹೋದರೆ ಅದನ್ನು ಸರಿಪಡಿಸಲಾಗುವುದಿಲ್ಲವೆ? ಗಂಡು

ಸರು ಈ ಅಂಥ ಪರಂಪರೆಯನ್ನು ತಮ್ಮ ಕಾಮತೃಪ್ತಿಗಾಗಿ ಮಾತ್ರ
ಸರಿಸುತ್ತಾರೆ. ಇದು ಘೋರ ಅನ್ಯಾಯ. ಈ ವ್ಯವಸ್ಥೆಯನ್ನು ಸೃ
ದವನು ದೇವತೆಯಾಗಲಿ, ಋಷಿಯಾಗಲಿ, ಮಹಾತ್ಮನಾಗಲಿ ಅವನ
ಮನುಷ್ಯ ಜಾತಿಯ ಶತ್ರುವೆಂದು ತಿಳಿಯಬೇಕು. ಸ್ತ್ರೀಯರಿಗೆ ಪಾತಿವ್ರತ
ಭೂಷಣವೆಂದು ಸಾರಿದ್ದೇ, ಅಬಲೆಯರನ್ನು ಆ ಬಲೆಯಲ್ಲಿ ಹಿಡಿ
ವುದಕ್ಕಾಗಿ."

"ಇಂತಹ ಶಾಸ್ತ್ರಗಳನ್ನು ರಚಿಸಿದವರು ಪುರುಷರಷ್ಟೆ?"

"ಸರಿ, ಆದರೆ ಅದು ಧೂರ್ತರ ಕಪಟಾಚಾರ."

"ಹೊಸತನ್ನು ಪ್ರೋತ್ಸಾಹಿಸುವ ನೀವು, ಅಮೃತರಾಯರನ್ನ
ದೂಷಿಸುವಿರಿ?"

"ಅವನ ನಡತೆಯು ಶುದ್ಧವಾಗಿಲ್ಲ, ಅದಕ್ಕಾಗಿ. ಅವನು ವಿವಾ
ಬಂಧನದಲ್ಲಿ ಸಿಲುಕದೇನೇ ತೃಪ್ತನಾಗಬೇಕೆಂದಿದ್ದಾನೆ. ಅವನ ವಿಧ
ಶ್ರಮವು ಬರಿಯ ಭೋಗಾಲಯ. ಇದಕ್ಕಾಗಿಯೇ ನಾನವನನ್ನು ವಿರ
ಧಿಸುವುದು. ವಿಧವೆಯರನ್ನುದ್ಧಾರಮಾಡಬೇಕೆಂಬವನು ವಿಧವೆಯ
ಮದುವೆಯಾಗಲೊಪ್ಪುವುದಿಲ್ಲವೇಕೆ?" ಕೈಗಡಿಯಾರವನ್ನು ನೋಡಿಕೊಂ
ಕಮಲಾಪ್ರಸಾದನು ತನ್ನ ಮಾತನ್ನು ಮುಂದುವರಿಸಿದನು. "ಅರೆ! ಗ
ಎರಡಾಯಿತು. ಇನ್ನು ವಿಲಂಬ ಮಾಡುವುದು ಸರಿಯಲ್ಲ. ಇದೋ,
ದೀಪದ ಅಗ್ನಿದೇವನ ಸಾಕ್ಷಿಯಾಗಿ, ಆಜೀವವೂ ನಾವಿಬ್ಬರೂ ಪತಿಪತ್ನಿ
ರಾಗಿರುವೆವೆಂದು ಪ್ರತಿಜ್ಞೆ ಮಾಡೋಣ."

ಈ ಮಾತನ್ನು ಕೇಳಿ ಪೂರ್ಣೆಯ ಮುಖವು ವಿವರ್ಣವಾಯಿ
ಅವಳು ಎದ್ದು ನಿಂತಳು. "ಈಗಲೇ ಅಲ್ಲ. ಈ ವರ್ಷವಿಡೀ ಅ
ಅಲ್ಲಿಯ ವರೆಗೆ ಚೆನ್ನಾಗಿ ಆಲೋಚಿಸೋಣ. ಅವಸರವೇನು?" ಎಂ
ಹೇಳುತ್ತಿದ್ದಾಗಲೇ ಬಾಗಿಲು ತೆಗೆದು ವೇಗದಿಂದ ಹೊರಗೆ ಹೋದ
ಕಮಲಾಪ್ರಸಾದನು ಕುಳಿತಲ್ಲಿಂದಲೇ "ಪಕ್ಷಿಯು ಮೇವನ್ನು ತಿನ್ನು
ತಿನ್ನುತ್ತಾ ಸಮೀಪ ಬಂತು. ಬೇಡನು ಕೈನೀಡಿದೊಡನೆಯೇ ಫುರ್ರೆಂ
ಹಾರಿಹೋಯಿತು. ಆದರೆ ಕೊನೆಯ ವರೆಗೂ ಹೀಗೆ ಮಾಡೀತೇ?" ಎಂ
ಆಲೋಚಿಸುತ್ತಿದ್ದಿರಬೇಕು.

---

ಪೂರ್ಣೆಯು ಕಮಲಾಪ್ರಸಾದನ ಸುದ್ದಿಯನ್ನೇ ಬಿಡಬೇಕೆಂದು
ಹಿಸುತ್ತಿದ್ದಳು. ಆದರೆ ಅವನೆಲ್ಲಿಯಾದರೂ ಆತ್ಮಹತ್ಯೆಯನ್ನು ಮಾಡಿ
ಂಡರೆ? ಎಂಬ ಪ್ರಶ್ನೆಯೇಳುತ್ತಿತ್ತು. ರಾತ್ರಿಯೇನೋ ಅವನ ಉಪೇಕ್ಷೆ
ನ್ನು ಮಾಡಿ ಬಂದಿದ್ದಳು, ಆದರೆ ಶೇಷರಾತ್ರಿಯನ್ನು ಚಿಂತೆಯಲ್ಲಿಯೇ
ದಳು. ಅವಳ ವಿಚಲಿತ ಹೃದಯವು ಪತಿಭಕ್ತಿ, ಸಂಯಮ ಮತ್ತು
ತದ ವಿರುದ್ಧ ತರತರದ ತರ್ಕಗಳನ್ನು ಮಾಡತೊಡಗಿತು. ತಾನೊಂದು
ಳೆ ಮೃತಿಯನ್ನೈದುತ್ತಿದ್ದರೆ ಅವರು ಬೇರೆ ಮದುವೆಯಾಗುತ್ತಿದ್ದಿಲ್ಲವೆ?
ಪ್ಪತ್ತೈದು ವರ್ಷಗಳಲ್ಲೇ ಅವರು ವಿಧುರಜೀವನವನ್ನನುಭವಿಸುತ್ತಿದ್ದರೇ?
ದೂ ಇಲ್ಲ. ಕಮಲಾಪ್ರಸಾದನಂತೆ ಅವರೆಂದಾದರೂ ಪ್ರೇಮವನ್ನು
ಕ್ತಮಾಡಿರುವರೆ? ಇಷ್ಟು ಅವಕಾಶವಾದರೂ ಇತ್ತೆ? ಇಡೀ ದಿನ ಅವರು
ಕೇಸಿನಲ್ಲಾದರೆ, ಸುಖ ಕೊಡುವುದು ಹೇಗೆ? ಅಳುತ್ತಾ ಅಳುತ್ತಾ ಪ್ರಾಣ
ರೆಯುವುದಕ್ಕೇ ತಾನು ಜನಿಸಿದುದೆ? ಸ್ವರ್ಗ ನರಕವೆಲ್ಲ ಸುಳ್ಳು. ಸುಖವೇ
ರ್ಗ; ದುಃಖವೇ ನರಕ. ವಿವಾಹವೆಂದರೂ, ಅದೊಂದು ಆಡಂಬರವೇ
. ಯಾರಲ್ಲಿ ಪ್ರೇಮವಿದೆಯೋ ಅದೇ ವಿವಾಹ, — ಮನಸ್ಸು
ದಾಗಲಿರುವ ಸಾಧನ. ಸ್ತ್ರೀ ಪುರುಷರ ಮನಸ್ಸು ಇಬ್ಬಗೆಯಾದರೆ
ವಾಹವೆಂದೂ ಅದನ್ನು ಒಂದಾಗಿಸಲಾರದು. ವಿವಾಹದ ಮೇಲೂ
ರುಷರು ಸ್ತ್ರೀಯರನ್ನು ತೊರೆಯುವುದಿಲ್ಲವೆ? ಹಾಗಾದರೆ ವಿವಾಹದಲ್ಲೇ
? ವಿವಾಹವಾಗದೆಯೂ ಸ್ತ್ರೀ ಪುರುಷರು ಒಂದಾಗಬಹುದೆಂದಾಯಿತು.
ಕುತ್ಸಿತಭಾವನೆಗಳು ಪೂರ್ಣೆಯನ್ನಾವರಿಸಿದವು.

ಪ್ರಾತಃಕಾಲ ಅವಳೆದ್ದು ತಲೆಬಾಚುತ್ತಿದ್ದಳು. ಆಗ ಸುಮಿತ್ರೆಯು
ದಳು. "ಕುಳಿತುಕೊ, ಸುಮಿತ್ರಾ. ಇಂದು ಬೆಳಗ್ಗೇನೇ ಎಚ್ಚರವಾ
ತು" ಎಂದಳು. ಪೂರ್ಣೆಯ ಮಾತು ಮೃದುವಾಗಿತ್ತು.

"ನಿದ್ದೆ ಬಂದಿದ್ದರಷ್ಟೆ?"

"ಯಾವ ಯಾವ ರೀತಿಯ ಮನುಷ್ಯರಿದ್ದಾರೆ!"

"ನೀನು ಈ ವಿದ್ಯೆಯಲ್ಲಿ ಚತುರೆಯಿರುವೆ."

"ನಾನು ಆ ವಿದ್ಯೆಯನ್ನು ಕಲಿತಿಲ್ಲವಲ್ಲ?"

"ಮೊದಲು ನಾನೂ ಹಾಗೆ ತಿಳಿದಿದ್ದೆ. ಈಗ ನನಗೆ ಯಥಾರ್ಥವು
ಯಿತು."

"ನೀನಿಂದು ಜಗಳವಾಡಲು ಬಂದುದೇನು?"

"ಹೌದು, ಅದಕ್ಕೇ ಬಂದುದು. ನಾವಿಬ್ಬರೂ ಈ ಮನೆಯಲ್ಲಿ
ಲಾಗದು."

ಈ ಮಾತಿಗೆ ಪೂರ್ಣೆಯು ಯಾವ ಉತ್ತರವನ್ನೂ ಕೊಡಲಿಲ್ಲ. ಸ
ತ್ರೆಯೇ ಮಾತು ಮುಂದುವರಿಸಿದಳು; "ನಿನ್ನ ರೂಪ, ಯೌವನ, ಮ
ಸರಸಸ್ವಭಾವ ನನಗೆ ಘಾತವಾದೀತೆಂದು, ನೀನು ಈ ಮನೆಯಲ್ಲಿ ಕಾಲಿಟ
ನೆಯೇ ಊಹಿಸಿದ್ದೆ. ಅದರಿಂದಾಗಿಯೇ ಯಾವಾಗಲೂ ನಿನ್ನನ್ನು
ಜೊತೆಯಲ್ಲಿಟ್ಟುಕೊಂಡಿದ್ದೆ. ಆದರೆ ಇದು ನನ್ನ ಅಂಕೆಯಲ್ಲುಳಿಯ
ನಿನ್ನ ಹೃದಯವು ನಿಷ್ಕಪಟವೆಂದು ನನಗೆ ಗೊತ್ತು. ನಿನ್ನನ್ನು ನಿನ್ನ
ಬಿಡುತ್ತಿದ್ದರೆ, ನಿನ್ನ ವ್ರತದಿಂದ ನೀನು ಹಿಂಜರಿಯುತ್ತಿದ್ದಿಲ್ಲ. ನೀರಿನಲ್ಲೇ ಇ
ತೆರೆಯಿಂದ ತಪ್ಪಿಸುವುದು ನಿನ್ನಿಂದಾಗಲಿಲ್ಲ. ಲಂಗರು ಇಲ್ಲದ ನಾವೆ
ಸ್ಥಿರವಾಗಿ ನಿಂತೀತೆ? ಹಾದಿಯಲ್ಲಿ ಬಿದ್ದ ಗಂಟನ್ನೆತ್ತಿಕೊಳ್ಳಲು ಯಾ
ಸಂಕೋಚವಿದೆ? ಇದೇ ಕಣ್ಣುಗಳಿಂದ ನಾನೆಲ್ಲವನ್ನೂ ನೋಡಿರುವ
ನಾನು ಹೇಳುತ್ತಿರುವುದು ನಿನ್ನ ಒಳ್ಳೆಯದಕ್ಕೆ. ಇನ್ನಾದರೂ ನಿನಗೆ ಒಳ್ಳೆ
ದಾಗಿರಬೇಕೆಂದಾದರೆ, ಈ ದುಷ್ಕರ್ಮಿಯ ನೆರಳನ್ನು ಕೂಡ ನಿನ್ನ ಮ
ಬೀಳಗೊಡಬೇಡ. ನನ್ನ ಸುಖಕ್ಕಾಗಿ ಈ ಮಾತುಗಳನ್ನು ನಾನು ಹ
ವುದಲ್ಲ. ನಾನು ಮೊದಲಿನಂತೆಯೇ ಈಗಲೂ ಇರುವೆನು. ಈ ಪಿಶಾಚಿ
ನಿನ್ನನ್ನು ಹೇಗೂ ಬಿಡಲಾರದು. ಒಂದು ಸಲಹೆಯನ್ನು ಕೊಡುವ
ಆಗಬಹುದೇ, ಹೇಳು."

ಪೂರ್ಣೆಯು ಒಂದು ತುಟಿ ಎರಡು ಮಾಡಲಿಲ್ಲ. ಒಂದೇ
ಗ್ಲಾನಿಮಯ ದೃಷ್ಟಿಯನ್ನು ಬೀರಿದಳಷ್ಟೆ!

ಸುಮಿತ್ರೆ ತನ್ನ ಮಾತುಗಳನ್ನು ಮುಂದುವರಿಸಿದಳು. "ಅ
ನಿನ್ನನ್ನು ವಿವಾಹಮಾಡಿಕೊಳ್ಳುವರೋ ಎಂದು ಕೇಳು. - ವಿವಾಹವೆ
ಕೇವಲ ಕ್ಷಣಿಕ ಹಾಸ. ಮತ್ತೆ ಯಾರೂ ಏನೂ ಹೇಳಲಾರರು. ಈ
ಮುಚ್ಚಿಡುವುದೆಂದರೆ ಆತ್ಮ ಮತ್ತು ಪರಲೋಕ ಇವೆರಡನ್ನೂ ಹಾಳುವ
ಕೊಳ್ಳುವುದು. ಅವರ ಪ್ರೇಮದ ಪರೀಕ್ಷೆಮಾಡಿದಂತೆಯೂ ಆಗುವ
ವಿವಾಹಕ್ಕವರೊಪ್ಪಿದರೆ ನಿಜವಾದ ಪ್ರೇಮವೆಂದು ತಿಳಿ. ತಿರಸ್ಕರಿಸಿ
ಕಾಮುವಾಸನಾತೃಪ್ತಿಗಾಗಿ ನಿನ್ನ ಬಲಿ ತೆಗೆದುಕೊಳ್ಳಲು ಇರುವ ಬ
ಯೆಂದು ಗ್ರಹಿಸು. ಅವರು ವಿವಾಹಕ್ಕೊಪ್ಪಲಾರರೆಂದು ಬೇಕಾದರೆ ನ
ಶರ್ತವಿಟ್ಟೇನು. ನಿನಗೆ ಬೇಕಾದ ಆಶೆಯನ್ನು ತೋರಿಸಿಯಾರು. ಅ

ಂಗ್ರತೆ! ಸುಣ್ಣಗೆ ಹೊಳೆಯುವ ಜೇಡನ ಬಲೆಯು ತಮ್ಮ ಪ್ರಾಣಾಪಹಾರ ರುವುದೆಂದು ಪತಂಗಗಳಿಗೆ ತಿಳಿಯುವುದೆ? ಅವರ ಲೀಲಾಜಾಲವು ಅದ ಂತೆಯೇ! ಅವರು ಯಾರಿಗೂ ಮುಖ ತೋರಿಸದಂತೆ ಮಾಡಲಿರುವೆನು."

ಪೂರ್ಣೆಗೆ ಕಣ್ಣೀರು ಉಕ್ಕಿತು. ಆದರೂ ಅವಳು "ನಾನೆಲ್ಲಾದರೂ ೀರಲ್ಲಿ ಮುಳುಗಿ ಸತ್ತರಾಗದೆ?" ಎಂದಳು.

"ನೀನು ಸತ್ತರೆ ನನಗೇನು ಲಾಭ? ಅವರು ಅವರ ಸ್ವಭಾವವನ್ನು ಡಲಾರರು. ನಾನೂ ಬಿಡಲಾರೆ. ಅವರ ದ್ರವ್ಯಪಿಪಾಸೆಯು ಕಡಿಮೆ ಾಗಲಾರದು; ನನ್ನ ತಿರಸ್ಕಾರವೂ ಕಡಿಮೆಯಾಗಲಾರದು. ಮೊದಲು ಿನು ಅವರನ್ನಿಷ್ಟು ಅಲ್ಪರೆಂದು ತಿಳಿದಿರಲಿಲ್ಲ. ಅವರು ಪ್ರೀತಿಸಿಯಾರೆಂದು ಿಳಿದಿದ್ದೆ. ನಾನು ಅವರೊಡನೆ ಪ್ರೇಮದ ಚೇಷ್ಟೆಯನ್ನು ಮಾಡುತ್ತಿದ್ದೆ. ದರೆ ನಾನು ರಾತ್ರಿ ನಡೆದುದನ್ನು ನೋಡಿದ ಮೇಲೆ ಇವೆಲ್ಲಾ ಮಾಯ ಾದುವು. ಎಲ್ಲವನ್ನೂ ಸಹಿಸಿಯೇನು; ಆದರೆ ಲಂಪಟತನವನ್ನು ಮಾತ್ರ ಾನೆಂದೂ ನೋಡಲಾರೆ. ದೇವರಾಣೆ, ನಿನ್ನಲ್ಲಿ ನನಗೇನೂ ಸಿಟ್ಟಿಲ್ಲ. ನಿನ್ನ ೕಲೆ ದಯೆಯುಂಟಾಗುತ್ತಿದೆ. ಸಿಟ್ಟಿನ ಭರದಲ್ಲಿ ನಾನೇನಾದರೂ ಕಠೋರ ಚನಗಳನ್ನಾಡಿದ್ದರೆ ಕ್ಷಮಿಸು. ಜ್ವಲಿಸುವ ಹೃದಯದಿಂದ ಹೊಗೆಯಲ್ಲದೆ ುತ್ತೇನು ಹೊರಟೀತು?"

ಪೂರ್ಣೆಯ ಮನಸ್ಸು ಇಂದಿನಷ್ಟು ಎಂದೂ ದುರ್ಬಲವಾಗಿದ್ದಿಲ್ಲ. ವಳ ಜೀವಿತವೀಗ ಸುಮಿತ್ರೆಯ ಮುಷ್ಟಿಯೊಳಗಿದೆ. ಸುಮಿತ್ರೆಯ ಸ್ಥಾನ ಲ್ಲಿ ಅವಳು ಇರುತ್ತಿದ್ದರೆ, ಇಷ್ಟು ಉದಾರಳಾಗುತ್ತಿದ್ದಳೆ? ವಿಷವನ್ನು ಕೊಡು ದ್ದಳು. ಈ ದಯೆಯು ಭಾಗ್ಯಹೀನೆಯಾದ ಪೂರ್ಣೆಯನ್ನು ಅಳುತ್ತಾ ುಮಿತ್ರೆಯ ಕಾಲಿಗೆ ಬೀಳುವಂತೆ ಮಾಡಿತು. "ಅಕ್ಕಾ, ನನ್ನ ಮೇಲೆ ದಯೆ ಡು" ಎಂದಳು. ಸುಮಿತ್ರೆಯು ಅವಳನ್ನೆತ್ತಿ ಸಂತೈಸುತ್ತಾ "ನಿನ್ನಲ್ಲಿ ನಗೇನೂ ಸಿಟ್ಟಿಲ್ಲವೆಂದು ಹೇಳಿದೆನಲ್ಲ? ಇನ್ನು ಆ ಧೂರ್ತನಿಂದ ತಪ್ಪಿಸಿ ಳ್ಳುವ ಉಪಾಯವನ್ನೇನಾದರೂ ಯೋಚಿಸಬೇಕು" ಎಂದಳು.

ಪೂರ್ಣೆಯು ದೀನಸ್ವರದಿಂದ "ಅಕ್ಕಾ, ನಾನೇನು ಮಾಡಲಿ? ನನ್ನ ಲಿಗೆ ನೀನಾಗಿದ್ದರೇನುಮಾಡುತ್ತಿದ್ದೆ? ನಾನು ಮಾಡಿದಂತೆಯೇ ಮಾಡ ಕಾಗಿತ್ತು. ಅವರು ತಮ್ಮ ಪ್ರಾಣದ ಭಯವನ್ನು ತೋರಿಸಿದ್ದಾರೆ." ದಳು.

ಸುಮಿತ್ರೆಯು ನಗುತ್ತಾ "ಅವರ ಆ ಹೆದರಿಸುವಿಕೆಗೆ ನಾನು ತಲೆ ಸುತ್ತಿದ್ದೆನೆಂದೆಣಿಸುವೆಯಾ? ನೀವು ಪ್ರಾಣವನ್ನೇ ತ್ಯಜಿಸಿರಿ ಎನ್ನುತ್ತಿದೆ.

ಧೂರ್ತರದಿದೊಂದು ಉಪಾಯವೆಂದು ನಿನಗರಿಯದೆ? ಈ ರೀತಿ ಪ್ರೇಮದ ಗಾಳವನ್ನಿಕ್ಕಿ ರಮಣಿಯರನ್ನು ಸೆಳೆಯುವ ಹಂಚಿಕೆಯಿದು. ಇಂತಹ ವಿಷಯವಾಸನೆಯ ಗೊಂಬೆಗಳು ಸತ್ತರೆ ಪ್ರಪಂಚವು ಸ್ವರ್ಗವಾದೀತು" ಎಂದು ಮರುನುಡಿದಳು.

"ನನ್ನ ಬುದ್ಧಿಯು ಅದೇಕೆ ಮಲಿನವಾಯಿತೊ?"

"ನನಗೆ ಮಾತ್ರ ಇದೊಂದು ವಿಶೇಷದ ಮಾತಲ್ಲ. ಪ್ರೇಮದ ಮಾತನ್ನು ಕೇಳಿ ಬಲೆಗೆ ಬೀಳದವರು ಬಹಳ ವಿರಳ, ಪೂರ್ಣಾ-"

ಅಷ್ಟರಲ್ಲಿ ಕಮಲಾಪ್ರಸಾದನು ಕೈಯಲ್ಲೊಂದು ಪತ್ರವನ್ನು ಹಿಡಿದು ಕೊಂಡು ಬಂದನು. ಒಳಗೆ ಕಾಲಿಡುತ್ತಲೇ ಸುಮಿತ್ರೆಯನ್ನು ನೋಡಿ ಒಮ್ಮೆ ಹಿಂಜರಿದನು. ಮತ್ತೆ ಮಾತಿಗಾರಂಭಿಸಿದನು; "ಪೂರ್ಣಾ, ಪ್ರೇಮಕುಮಾರಿ ಯಲ್ಲಿಗೆ ನೀನು ಹೋಗಬೇಕೆಂದು ಆಕೆ ಬರೆದಿರುವಳು. ನಾನು ಗಾಡಿ ಕಟ್ಟಲು ಹೇಳಿದ್ದೇನೆ. ಹೊರಡು. ನಿನ್ನನ್ನಲ್ಲಿ ಮುಟ್ಟಿಸಿ ಬರುವೆನು."

ಪೂರ್ಣೆಯು ಸುಮಿತ್ರೆಯ ಕಡೆ ನೋಡಿದಳು. ಅದರಲ್ಲಿ "ನಿನ್ನದೇನು ಅಭಿಪ್ರಾಯ?" ಎಂಬ ಭಾವವು ತುಂಬಿತ್ತು. ಆದರೆ ಸುಮಿತ್ರೆಯು ಗೋಡೆಯ ಕಡೆ ನೋಡುತ್ತಿದ್ದಳು. ನೋಟದಲ್ಲಿ ಅವಳಿಗೂ ಪೂರ್ಣೆಗೂ ಯಾವ ಸಂಬಂಧವೂ ಇಲ್ಲವೆಂಬ ಭಾವವು ತೋರುತ್ತಿತ್ತು.

"ನೀವು ಹೋಗಿರಿ. ನಾನು ಯಾವಾಗಲಾದರೂ ಹೋದೇನು." ಪೂರ್ಣೆಯು ಅಸಮಂಜಸಭಾವದಿಂದ ಉತ್ತರವಿತ್ತಳು.

"ಅದಾಗಲಾರದು. ಏನೋ ಅಗತ್ಯ ಕೆಲಸವಿರಬೇಕು."

ಪೂರ್ಣೆಯು ಪುನಃ ಸುಮಿತ್ರೆಯ ಕಡೆ ನೋಡಿದಳು. ಆದರೆ ಅವ ಳಿನ್ನೂ ಗೋಡೆಯ ಕಡೆಗೇ ನೋಡುತ್ತಿದ್ದಳು. "ಹೂಂ" ಎಂದಾಗಲಿ, "ಬೇಡ" ಎಂದಾಗಲಿ ಅವಳು ಸೂಚಿಸಲಿಲ್ಲ. ಪೂರ್ಣೆಯು ಪ್ರೇಮಕುಮಾರಿಯನ್ನು ನೋಡದೆ ಎಷ್ಟೋ ಸಮಯವಾಗಿತ್ತು. ಆದುದರಿಂದ ಅವಳನ್ನು ಕಾಣುವ ಆತುರ ಅಷ್ಟಿಷ್ಟಲ್ಲ. ಯಾಕೆ ಕರೆದಳೆಂದು ತಿಳಿಯುವುದಿಲ್ಲ. ಇಷ್ಟು 'ತರಾತುರಿ'ಯಲ್ಲಿ ಕರೆದಳೆಂದಾದ ಮೇಲೆ ಏನೋ ಅಗತ್ಯ ಕೆಲಸವಿರಬೇಕು. ಮಾರ್ಗದಲ್ಲೇ ಹೋಗುವುದಾದ ಮೇಲೆ ಇವನೊಡನೆ ಹೋಗುವುದಕ್ಕೇನು ಆತಂಕ? ಅಲ್ಲಿ ಮೂರು ನಾಲ್ಕು ದಿನವಿದ್ದರೆ ಚಿತ್ತವು ಶಾಂತವಾದೀತು. ಈ ಮಹಾಶಯನ ಬಾಧೆಯೂ ತಪ್ಪೀತು. ಇಷ್ಟು ಯೋಚಿಸಿ, ಬಳಿಕ "ನೀವೇಕೆ ಕಷ್ಟಪಡುವಿರಿ? ನಾನು ಒಬ್ಬಳೇ ಹೋಗುವೆನಲ್ಲ!" ಎಂದಳು. "ಸರಿ, ನಿನ್ನಿಷ್ಟ. ನನಗೆ ಹೇಗೂ ದಾನಾನಾಥನೊಡನೆ ಮಾತಾಡುವುದಕ್ಕಾಗಿ

ಹೋಗಲಿದೆ. ಹೇಗೂ ಗಾಡಿಯಿದೆ. ನೀನೂ ಅದರಲ್ಲಿ ಬರಬಹುದಲ್ಲ ಎಂದೆನಷ್ಟೆ." ಎಂದು ಗಲಿಬಿಲಿಯಲ್ಲೆಂದನು ಕಮಲಾಪ್ರಸಾದ.

"ಅಂದರೆ ಈಗಲೇ ಹೋಗುವಿರಾ?"

"ನಾನು ಹೊರಟಿದ್ದೆ." ಎನ್ನುತ್ತಾ ಬಾಗಿಲ ಕಡೆ ಹೊರಟನು.

ಕಮಲಾಪ್ರಸಾದನು ಹೋದೊಡನೆಯೇ ಪೂರ್ಣೆಯು ಸುಮಿತ್ರೆಯೊಡನೆ "ಇವರೊಂದಿಗೆ ಹೋದರೇನು?" ಎಂದು ಕೇಳಿದಳು.

"ಒಟ್ಟಿಗೆ ಹೋದದ್ದರಲ್ಲೇನು? ಆದರೆ ಬೇಗನೆ ಬಂದುಬಿಡು. ನನ್ನನ್ನು ಮರೆಯಬೇಡ" ಎಂದು ಆಶ್ವಾಸನೆ ಕೊಡುತ್ತಾ ಸುಮಿತ್ರೆಯು ಉತ್ತರ ಕೊಟ್ಟಳು. ಈ ಮಾತನ್ನು ಕೇವಲ ಶಿಷ್ಟಾಚಾರಕ್ಕಾಗಿ ಮಾತ್ರ ಹೇಳಿದುದು. ಅಂತರಂಗದಲ್ಲಿ ಬೇರೊಂದು ಭಾವವು ಅಡಗಿತ್ತು. ಪೂರ್ಣೆಯು ಹೋಗುವುದು ಅವಳಿಗೆ ಹಿತವಾಗಿತ್ತು. ಕಮಲಾಪ್ರಸಾದನ ಮೇಲಿಂದ ಪೂರ್ಣೆಯ ಮನಸ್ಸು ತಿರುಗಿದ ಮೇಲೆ ಅವರೊಳಗೆ ಕೆಲವು ದಿನ ವಿಚ್ಛೇದವಾಗುವುದು ಹಿತವಾಗದಿದ್ದೀತೆ? ಅಲ್ಲಿಗೆ ಹೋದ ಮೇಲೆ ಅವಳು ಇಲ್ಲಿಗೆ ಬರಲು ಆಶೆ ಪಡಲಾರಳು. ಪ್ರೇಮಕುಮಾರಿಯು ತನ್ನ ಮನೆಯಿಂದ ಹೋಗು ಎನ್ನಲಾರಳು. ಇವೆಲ್ಲಾ ಮನಸ್ಸಿನೊಳಗಿನ ವಿಚಾರಗಳು.

ಆದರೆ ಗಾಡಿಯಲ್ಲಿ ಕುಳಿತ ಪೂರ್ಣೆಗೆ ಗಾಡಿಯಾಳಿನ ಸ್ಥಾನದಲ್ಲಿ ವಾಘೆಗಳನ್ನು ಹಿಡಿದು ಕುಳಿತಿದ್ದ ಕಮಲಾಪ್ರಸಾದನನ್ನು ಕಂಡೊಡನೆಯೇ ಯಾವುದೋ ಒಂದು ಶಂಕೆಯುಂಟಾಯಿತು. ಒಮ್ಮೆ "ಗಾಡಿಯಿಂದಿಳಿದರೇನು" ಎನ್ನಿಸಿತು. ಆದರೆ ಅದಕ್ಕೊಂದು ಕಾರಣ ಬೇಕಷ್ಟೆ? ಅದೇನೂ ಕಂಡುಬರಲಿಲ್ಲ. ಇದೇ ಸ್ಥಿತಿಯಲ್ಲಿ ಪೂರ್ಣೆಯಿದ್ದಾಗ ಕಮಲಾಪ್ರಸಾದನು ಕುದುರೆಗಳಿಗೆ ಚಾಟಿಯಿಂದ ಬಾರಿಸಿದನು. ಗಾಡಿಯು ಹೊರಟಿತು.

ಕೆಲವು ದೂರ ಪರಿಚಿತಮಾರ್ಗದಲ್ಲೇ ಗಾಡಿಯು ನಡೆಯಿತು. ಅವೇ ಮಂದಿರಗಳು; ಅವೇ ಅಂಗಡಿಗಳು. ಪೂರ್ಣೆಯ ಸಂಶಯವು ದೂರವಾಯಿತೋ ಎನ್ನುವಾಗ ಒಂದು ಅಪರಿಚಿತವಾದ ತಿರುಗಾಸಿನಲ್ಲಿ ಗಾಡಿಯು ತಿರುಗಿದೊಡನೆಯೇ ಸರಿಯಾದ ಮಾರ್ಗವಿದಲ್ಲವೆಂದು ಭಾಸವಾಯಿತು. ಕಮಲಾಪ್ರಸಾದನೊಡನೆ "ಇಲ್ಲಿ ಎಲ್ಲಿಗೆ ಹೋಗುವುದು?" ಎಂದು ಕೇಳಿದಳು.

"ಅಲ್ಲಿಂದ ಹೋಗುವುದಾದರೆ ಬಹು ಸುತ್ತು. ಇಲ್ಲಿಂದಾದರೆ ಬೇಗನೆ ಮುಟ್ಟಬಹುದು" ಎಂದುತ್ತರ ಬಂದಿತು.

ಪೂರ್ಣೆಯು ನಿಶ್ಚಿಂತಳಾದಳು; ಸುಮ್ಮನಾದಳು. ಕೆಲವು ನಿಮಿಷ ಓಣಿಯಲ್ಲಿ ಹೋಗಿ ಒಂದು ಅಗಲ ರಸ್ತೆಗೆ ಬಂತು. ಆ ಮೇಲೆ ರೀಲ್ವೆ

ರಸ್ತೆಯನ್ನು ದಾಟಿತು. ದೂರ ದೂರದಲ್ಲೊಂದೊಂದು ಬಂಗಲೆಗಳು ಮಾತ್ರ ದೃಷ್ಟಿಗೆ ಗೋಚರವಾದುವು.

ಪೂರ್ಣೆಯು ಗಾಬರಿಯಾಗಿ "ನನ್ನನ್ನೆಲ್ಲಿಗೆ ಕರೆದುಕೊಂಡು ಹೋಗುವಿರಿ?" ಎಂದು ಕೇಳಿದಳು.

"ನನ್ನ ಉದ್ಯಾನಕ್ಕೊಮ್ಮೆ ಹೋಗಿ, ಆ ಮೇಲೆ ಪ್ರೇಮಕುಮಾರಿಯ ಮನೆಗೆ ಹೋಗೋಣ."

"ಮೊದಲು ನನ್ನೊಡನೆ ಈ ಸುದ್ದಿ ಹೇಳಲೇ ಇಲ್ಲ. ಅಂದರೆ ನಾನು ನಿಮ್ಮೊಂದಿಗೆ ಬರುತ್ತಿದ್ದಿಲ್ಲ."

"ಒಂದು ಹತ್ತು ನಿಮಿಷ ಇಲ್ಲಿ ತಡೆದರೆ ಏನು ಅನರ್ಥವಾಗುವುದು?"

"ಗಾಡಿ ತಿರುಗಿಸಿರಿ . . . . ಇಲ್ಲ. ನಾನು ಕೆಳಗೆ ಹಾರುವೆನು."

"ಹಾರಿದರೆ ಕಾಲು ಮುರಿದೀತು. ನನಗೇನು?"

ಪೂರ್ಣೆಯು ಸಾಶಂಕನೇತ್ರಗಳಿಂದ ಕಮಲಾಪ್ರಸಾದನನ್ನು ನೋಡಿದಳು. ಈ ನಿರ್ಜನ ಪ್ರದೇಶಕ್ಕೆ ಯಾಕೆ ಕರೆತಂದ? ಮನಸ್ಸಿನಲ್ಲೇನಾದರೂ ಕೊಂಕುತನವಿದೆಯೆ? ಗಾಡಿಯು ನಿಂತಿತು. ಕಮಲಾಪ್ರಸಾದನು ಅವಳನ್ನು ಗಾಡಿಯಿಂದಿಳಿಸಿ, ಸಜ್ಜಿತಭವನದೊಳಕ್ಕೆ ಕರೆದುಕೊಂಡು ಹೋದನು. "ಇದೊಂದು ಕೆಟ್ಟ ಸ್ಥಳವಲ್ಲ. ಇಲ್ಲಿ ಗಂಟೆ ಗಂಟೆಗಳನ್ನು ಕಳೆಯಬಹುದು" ಎಂದು ಕಮಲಾಪ್ರಸಾದನ ಆಕಾಶಭಾಷಿತವಾಯಿತು.

ಪೂರ್ಣೆಯಿಂದು ಕೌಶಲದಿಂದ ಆತ್ಮರಕ್ಷಣೆಯನ್ನು ಮಾಡಬೇಕಾಗಿದೆ. "ಪ್ರೇಮಕುಮಾರಿಯು ನನ್ನ ದಾರಿ ಕಾಯುತ್ತಿರಬಹುದು. ಹಾಗಾಗಿ ನಾನು ಅವಸರಪಡುತ್ತಿದ್ದುದು" ಎಂದಳು.

"ಅದೆಲ್ಲಾ ನನಗೆ ಗೊತ್ತು. ನೀನು ನನ್ನನ್ನು ಇಂತಹ ದುರಾತ್ಮನೆಂದು ಗ್ರಹಿಸುತ್ತಿಯೆಂದು ನಾನು ಭಾವಿಸಿದ್ದಿಲ್ಲ."

"ನನ್ನೆಣಿಕೆ ಹಾಗಿದೆಯೆಂದು ನೀವು ಹೇಗೆ ತಿಳಿದುಕೊಂಡಿರಿ?"

"ಗಾಡಿಯಿಂದ ಹಾರುವುದಕ್ಕೆ ಯಾಕೆ ಆತುರಗೊಂಡೆ? ಗಾಡಿಯನ್ನು ಹಿಂದಿರುಗಿಸಬೇಕೆಂದುದೇಕೆ? ಘೋಷೆಯನ್ನು ಸರಿಸು. ಇದು ನಮ್ಮದೇ ಮನೆ. ಇಲ್ಲಿಗೆ ಬೇರೆ ಯಾರೂ ಬರುವಂತಿಲ್ಲ. ಹೇಳು, ನನ್ನನ್ನು ಕಂಡರೆ ನೀನು ಹೆದರುವುದೇಕೆ? ನಾನು ಕೊಲೆಗಡುಕನೇ? ಲಂಪಟನೆ? ನಿನ್ನೊಡನೆ ನನ್ನ ವ್ಯವಹಾರವು ಭಯೋತ್ಪಾದಕವಾಗಿದೆಯೆ? ಅಥವಾ ನಿನ್ನಿಚ್ಛೆಗೆ ವಿರೋಧವಾಗಿ ನಾನು ನಡೆದಿರುವೆನೆ? ನಿನ್ನಲ್ಲಿ ಈ ದುರ್ಭಾವನೆಯುದಿಸಲು ಸುಮಿತ್ರೆಯೇ ಕಾರಣ. ಅವಳು ಬೇಕಾದಷ್ಟು ನಿನ್ನ ಕಿವಿಯೂದಿರಬಹುದು.

ಆದರೆ ಎಲ್ಲವೂ ನಿನ್ನ ಮನಃಪರಿವರ್ತನೆಗೆ ಮಾತ್ರ. ಅವಳು ನನ್ನನ್ನು ತನ್ನ ಮುಷ್ಟಿಯೊಳಗಿಟ್ಟುಕೊಳ್ಳಬಲ್ಲವಳಾಗಿದ್ದರೆ, ನಾನು ಅವಳ ಸರ್ವಸ್ವವಾಗುತ್ತಿದ್ದೆ."

ಪೂರ್ಣೆಯ ಹೃದಯದಿಂದ ಸುಮಿತ್ರೆಯ ಮಂತ್ರವಾದದ ಶಕ್ತಿಯು ಕುಂದುತ್ತಾ ಬಂತು. ಅಸ್ಥಿರತೆಯು ದುರ್ಬಲ ಆತ್ಮಗಳ ಮುಖ್ಯ ಲಕ್ಷಣ. ಅಂಥವರಲ್ಲಿ ಮಾತಿನ ಪ್ರಭಾವ ಏರುವುದೂ ಇಳಿಯುವುದೂ ಬಹು ಬೇಗ. ಆದುದರಿಂದ ಪೂರ್ಣೆಯು "ಎಲ್ಲಾ ಅಪರಾಧವನ್ನೂ ಅವಳು ನಿಮ್ಮ ಮೇಲೆಯೇ ಹೊರಿಸುವಳು" ಎಂದಳು.

"ಏನು ಹೇಳಿದಳು?"

"ಎಷ್ಟೋ ಮಾತು ಹೇಳಿದಳು. ಅದೆಲ್ಲಾ ಯಾರಿಗೆ ನೆನಪಿದೆ?"

"ನೀನು ಇಲ್ಲಿಗೆ ಬರುವಾಗ ಉದಾಸೀನಳಾಗಿದ್ದೆ, ಅದೇಕೆ? ಈ ವನವೇನು ಸುಂದರವಾಗಿಲ್ಲವೆ?"

"ಕೆಟ್ಟದಾಗಿಲ್ಲ."

"ಒಂದರ್ಧ ತಿಂಗಳು ನಿನ್ನನ್ನು ಇಲ್ಲಿಡೋಣ ಎನಿಸುತ್ತದೆ."

"ನಾನೊಬ್ಬಳೇ ಇಲ್ಲಿ ಹೇಗಿರಲಿ? ಸುಮಿತ್ರೆಯೂ ಇದ್ದರಾಗಬಹುದು."

"ನೀನಿಲ್ಲಿರುವ ಸುದ್ದಿ ಯಾರಿಗೂ ಹತ್ತಲಾರದು. ಇಲ್ಲಿಯ ಆಳುಗಳಿಗೆ 'ಯಾರ ಕಿವಿಗೂ ಈ ಸುದ್ದಿಯನ್ನು ಬೀಳಗೊಡಬಾರದು' ಎಂದು ಅಪ್ಪಣೆ ಕೊಡುವೆನು . . . . . . ಆ ಆನಂದದ ಕಲ್ಪನೆಯನ್ನು ಮಾಡಿದೊಡನೆಯೇ ಸಂತೋಷದಿಂದ ಕುಣಿಯಬೇಕೆನ್ನಿಸುತ್ತದೆ. ಅದೇ ಜೀವನವು ನನ್ನ ಸಾಂಸಾರಿಕ ಆನಂದಸ್ವರ್ಗವಾಗಲಿ. ಯಾವುದೂ ಭಗವಂತನ ವಿರುದ್ಧ ಆಗುವುದೇ ಇಲ್ಲ, ಪೂರ್ಣಾ. ಸುಮಿತ್ರೆಯು ನನ್ನಲ್ಲಿ ಉದಾಸೀನಳಾಗಿರುವುದು ಆತನಾಣತಿಯಂತೆ. ನಿನ್ನ ಪ್ರಸಾದವೂ ಅದರಂತೆ. ನನ್ನ ನಿನ್ನ ಸಂಯೋಗವು ಆತನ ಕಲ್ಪಿತದಂತೆ. ಅವನ ಪ್ರೇರಣೆಯಂತೆ ಆಗುವುದಿಲ್ಲವೆಂದು ತಿಳಿದಿರುವೆಯಾ? ಖಂಡಿತ ಇಲ್ಲ. ಈ ಲೀಲೆಯನ್ನು ಅವನೇಕೆ ಆಡಿಸುವನೆಂದು ನಮ್ಮಿಂದ ಹೇಳಲು ಸಾಧ್ಯವಿಲ್ಲ. ಋಷಿಮುನಿಗಳಿಂದಲೂ ಹೇಳಬರುವುದಿಲ್ಲ. ಆದರೆ ಆಗುವುದೆಲ್ಲ ಅವನಿಗಾಗಿ. ಧರ್ಮಾಧರ್ಮವು ಬರಿಯ ಬೂಟಾಟಿಕೆ. ಇನ್ನು ಕೂಡ ನಿನ್ನ ಮನಸ್ಸಿನಲ್ಲೇನಾದರೂ ಧಾರ್ಮಿಕತೆಯಿರುವುದಾದರೆ, ಅದರ ಬೇರನ್ನು ಕಿತ್ತುಬಿಡು. ಇಂದಿನಿಂದ ನೀನು ನನ್ನ ಪ್ರಾಣೇಶ್ವರಿ; ನಾನು ನಿನ್ನ ದಾಸ!"

ಹೀಗೆ ಹೇಳುತ್ತಾ ಹೇಳುತ್ತಾ ಕಮಲಾಪ್ರಸಾದನು ಪೂರ್ಣೆಯ ಕೈ

ಹಿಡಿದುಕೊಂಡನು. ಪೂರ್ಣೆಯು ಸ್ವಲ್ಪವೂ ಹಿಂಜರಿಯಲಿಲ್ಲ; ಬಿಡಿಸಿ ಕೊಳ್ಳುವ ಪ್ರಯತ್ನವನ್ನೂ ಮಾಡಲಿಲ್ಲ. ಆದರೆ ಅವಳಲ್ಲಿ ಪ್ರಫುಲ್ಲತೆಯ ಚಿಹ್ನೆಯಿದ್ದಿಲ್ಲ; ಅಧರಗಳಲ್ಲಿ ಮಂದಹಾಸದ ಕುರುಹೂ ಇದ್ದಿಲ್ಲ. ಕಪೋಲ ಗಳ ಗುಲಾಬಿಯ ಬಣ್ಣ, ನಯನಗಳ ಅನುರಾಗದ ಲಾಲಿಮೆ, ಒಂದೂ ಇದ್ದಿಲ್ಲ. ಅವಳ ಮುಖಕಮಲವು ಬಾಡಿತ್ತು. ಮುದುಡಿದ ಕಣ್ಣುಗಳಿಂದ ಅಶ್ರುಪ್ರವಾಹವು ಹರಿಯುತ್ತಿತ್ತು. ದೇಹವಿಡೀ ಶಿಥಿಲವಾದಂತಿತ್ತು.

"ಉದಾಸೀನವೇಕೆ, ಪೂರ್ಣಾ? ಇದು ಆನಂದಕಾಲವಲ್ಲವೆ?" ಎಂದನು ಕಮಲಾಪ್ರಸಾದ. ಪೂರ್ಣಾ ಗ್ಲಾನಿಪೂರ್ಣಸ್ವರದಿಂದ "ಉದಾಸೀನವಿಲ್ಲ" ಎಂದು ತೊದಲಿದಳು.

ಅವಳಲ್ಲಿ ಈ ಜಾಡ್ಯವೇಕೆಬಂತೆಂದು ಅವಳಿಗರಿಯದು. ಅವಳಿಗೀಗ ವಸಂತಕುಮಾರನ ಚಿಂತೆಯಿದ್ದಿಲ್ಲ. ಅಧರ್ಮದ ಶಂಕೆ ಸೋಂಕಿರಲಿಲ್ಲ. ಆದರೆ ಇದರ ಪರಿಣಾಮವು ಹೇಗಿರಬಹುದೆಂಬ ಒಂದು ಚಿಂತೆ ಮಾತ್ರ ವಿದ್ದಿತ್ತು. ಅವಳ ಸುಖಸ್ವಪ್ನವನ್ನು ವಿಧಿಯು ಭಂಗಗೊಳಿಸಿಬಿಡಲಿಕ್ಕಿಲ್ಲವೆ? ಮೊದಲ ಬಾರಿ ಅವಳ ಸ್ವಾಮಿಯು ಅವಳನ್ನು ಆದರಿಸಿದಾಗ ಅವಳ ಹೃದಯವೆಷ್ಟು ನಿಶ್ಶಂಕೆಯಿಂದಿದ್ದಿತ್ತು ಎಂಬ ಆ ದೃಶ್ಯವು ಅವಳ ಕಣ್ಣೆದುರು ಕುಣಿಯಿತು.

ಅವಳು ಅದೇ ಅರ್ಧಚೇತನಾವಸ್ಥೆಯಲ್ಲಿದ್ದಾಗ ಕಮಲಾಪ್ರಸಾದನು ಅವಳನ್ನು ಮೆಲ್ಲಗೆ ಒಂದು ಮಂಚದ ಮೇಲೆ ಒರಗಿಸಿದನು. ಬಳಿಕ ಅವನು ಕದವನ್ನು ಮುಚ್ಚಲು ಹೋದಾಗ, ಅವಳು ಅವನ ಮುಖವನ್ನು ನೋಡಿ, ಬೆಚ್ಚಿಬಿದ್ದಳು. ಅವನ ಕಣ್ಣುಗಳಿಂದ ಕಿಡಿಗಳುರುಳುತ್ತಿದ್ದುವು. ಇದು ಆಂತರಿಕ ಉಲ್ಲಾಸದ ಮಧುರಜ್ಯೋತಿಯಂತಿದ್ದಿಲ್ಲ. ಯಾವುದೋ ಹಿಂಸಕ ಪ್ರಾಣಿಯ ರಕ್ತತೃಷ್ಣೆಯ ಪ್ರತಿಬಿಂಬದಂತೆ ಭಾಸವಾಯಿತು. ಪ್ರೇಮಿಯ ಪ್ರದೀಪ್ತ ಆಕಾಂಕ್ಷೆಯ ಬದಲು ವ್ಯಾಧನ ಹಿಂಸಾಸಂಕಲ್ಪವು ಅದಾಗಿತ್ತು. ಪೂರ್ಣೆಯ ಹೃದಯವು ದೃಢವಾಯಿತು. ತ್ವರೆಯಿಂದ ಮಂಚದಿಂದ್ದೆಳು. ಕಮಲಾಪ್ರಸಾದನನ್ನು ಹಿಂದೆ ದೂಡಿ, ಬಾಗಿಲು ತೆರೆದು ಜಗಲಿಗೆ ದುಮ್ಮಿಕ್ಕಿದಳು.

ಕಮಲಾಪ್ರಸಾದನ ದೃಷ್ಟಿಯು ಕ್ರೂರವಾಯಿತು. "ಏನು ಪೂರ್ಣಾ ಎಲ್ಲಿಗೆ ಹೋಗುವೆ?" ಎಂದು ಗರ್ಜಿಸಿದನು.

"ನಾನು ಮನೆಗೆ ಹೋಗುವೆನು. ಗಾಡಿಯೆಲ್ಲಿದೆ?" ಎಂದು ಪೂರ್ಣೆಯು ನಿರ್ಭೀತಳಾಗಿ ಉತ್ತರವಿತ್ತಳು.

"ಮನೆಗೆ ಹೋಗುವ ಅವಸರವೇನು? ಹೆದರಿದೆಯೇಕೆ?"

"ಗಾಡಿ ತನ್ನಿರಿ. ನಾನು ಹೋಗಲೇಬೇಕು."

"ಇಷ್ಟು ಬೇಗ ನೀನು ಹೋಗಲಾರೆ, ಪೂರ್ಣಾ. ಒಂದೊಮ್ಮೆಗೇ ನಿನಗೇನಾಯಿತೀಗ?"

"ಏನೂ ಆಗಿಲ್ಲ. ಇನ್ನೊಂದು ಕ್ಷಣವೂ ನಾನಿಲ್ಲಿರಲಾರೆ."

"ನಾನು ಹೋಗಗೊಡದಿದ್ದರೆ?"

"ನೀವು ನನ್ನನ್ನು ತಡೆಯಲಾರಿರಿ."

"ನಾನು ತಡೆದೆನೆಂದೇ ತಿಳಿ." ಕಮಲಾಪ್ರಸಾದನು ನಗುತ್ತಾ ಮುಂದುವರಿದನು. "ನಿನ್ನ ಗುಲ್ಲನ್ನು ಕೇಳುವವರು ಯಾರಿದ್ದಾರೆ ಇಲ್ಲಿ? ನೀನು ನನ್ನ ಸ್ವಾಧೀನದಲ್ಲಿರುವೆ. ಇಲ್ಲಿಂದ ನೀನು ಹೋಗಲಾರೆ. ಇಲ್ಲಿಯ ಆಳುಗಳಿಬ್ಬರೂ ಬರಲಾರರು. ಮೂರನೆಯವರಾರೂ ಇಲ್ಲಿರುವುದಿಲ್ಲ."

ಪೂರ್ಣೆಯ ಕಣ್ಣುಗಳು ಕಿಡಿಕಾರಿದುವು. ಅವಳು "ಕಮಲಾಬಾಬು, ನಾನು ಕೈಜೋಡಿಸಿ ಪ್ರಾರ್ಥಿಸುತ್ತೇನೆ. ನನ್ನನ್ನಿಲ್ಲಿಂದ ಹೋಗಬಿಡಿರಿ. ಬಿಡದಿದ್ದರೆ ಮಾತ್ರ ಒಳ್ಳೆಯದಾಗಲಿಕ್ಕಿಲ್ಲ. ಒಂದು ನಿಮಿಷ ಮೊದಲು ನೀವಾಡುತ್ತಿದ್ದ ಮಾತಿಗೂ, ಈಗಿನ ನಿಮ್ಮ ವರ್ತನೆಗೂ ಎಲ್ಲಿದೆ ಸಂಬಂಧ? ಇಷ್ಟು ಬಲಾತ್ಕರಿಸುವಿರಾ? ಜಾಗ್ರತೆ! ನನ್ನ ಧರ್ಮ ತೊರೆಯುವ ಮೊದಲು ನಿಮ್ಮ ಪ್ರಾಣ ತೆಗೆದೇನು; ಇಲ್ಲವೆ ನನ್ನ ಪ್ರಾಣವನ್ನು ತೊರೆದೇನು" ಎಂದು ಆರ್ಭಟಿಸಿದಳು.

"ಅಂದರೆ ನೀನೇ ವೀರರಮಣಿ" ಎನ್ನುತ್ತಾ ಕಮಲಾಪ್ರಸಾದನು ಅವಳ ಕೈಗಳನ್ನು ಹಿಡಿಯಬೇಕೆಂದು ಒಂದು ಅಡಿ ಮುಂಬರಿದನು. ಪೂರ್ಣೆಯು ಹಿಂಜರಿದಳು. ಅವನು ಮತ್ತೂ ಮುಂದುವರಿದನು. ಕ್ಷಣಮಾತ್ರದಲ್ಲಿ ಅವಳು ಎರಡೂ ಕೈಗಳಿಂದ ಕುರ್ಚಿಯೊಂದನ್ನೆತ್ತಿ, ತನ್ನ ಸರ್ವಶಕ್ತಿಯನ್ನುಪಯೋಗಿಸಿ, ಅವನ ಮುಸುಡಿಗೆಸೆದಳು. ಮುಖದಲ್ಲೊಂದು ಗಾಯ ಮಾಡಿ, ಹಲ್ಲುಗಳೆರಡನ್ನು ಮುರಿದು, ಕುರ್ಚಿಯು ಕೆಳಗೆ ಬಿತ್ತು. ಕಮಲಾಪ್ರಸಾದನು ಸಹಿಸಲಾರದೆ ನೆಲದ ಮೇಲೆ ಬಿದ್ದನು. ಗಾಯದಿಂದ ರಕ್ತವು ಬಸಬಸನೆ ಹರಿಯುತ್ತಿತ್ತು. ಅವನು ಸ್ಮೃತಿವಿಹೀನನಾದನು. ಅವನು ಹೀಗಿದ್ದಾಗ ಪೂರ್ಣೆಯು ಶಕ್ತಿಮೀರಿ ಓಡಿ ತೋಟದಿಂದ ಹೊರಗೆ ಹೋದಳು. ಮಾರ್ಗವು ಜನಶೂನ್ಯವಾಗಿತ್ತು. ಅವಳಿಗೀಗ ತನ್ನ ಜೀವವುಳಿಸುವ ಆಶೆ. ಹತ್ತಿರದಲ್ಲೊಂದು ಸಂಕವು ಕಂಡಿತು. ಅವಳು ಮಾರ್ಗದ ಕೆಳಗಿಳಿದು, ಆ ಸಂಕದ ಮರೆಯಲ್ಲಿ ಮರೆಯಾದಳು.

ಈ ಸಮಯದಲ್ಲಿ ಅಬಲೆಯ ಸ್ಥಿತಿಯು ಕಾರುಣಿಕವಾಗಿತ್ತು. ಎದೆಯು ದಡದಡನೆ ಹಾರುತ್ತಿತ್ತು. ಸ್ವಲ್ಪ ಶಬ್ದವಾದೊಡನೆಯೇ ಅವಳು ಹೆದರು ತ್ತಿದ್ದಳು. ಯಾರಾದರೂ ಸಂಕದ ಮೇಲೆ ನಡೆಯುವ ಶಬ್ದವು ಕೇಳಿದರೆ, ತನ್ನನ್ನು ಹಿಡಿಯಲಾರಾದರೂ ಬಂದರೋ ಎಂದು ಸಂದೇಹಗೊಳ್ಳುತ್ತಿದ್ದಳು. ಅವಳು ತನ್ನ ಸಮೀಪ ಒಂದು ಇಟ್ಟಿಗೆಯ ತುಂಡನ್ನಿಟ್ಟುಕೊಂಡಿದ್ದಳು. ಪೋಲೀಸರ ಸೆರೆಯಾಳಾಗುವುದಕ್ಕಿಂತ ಈ ಇಟ್ಟಿಗೆಯಿಂದ ತಲೆಯೊಡೆದು ಕೊಂಡು ಸಾಯುವುದೇ ಲೇಸೆಂದು ತಿಳಿದಿದ್ದಳು. ಅವಳಿಗೆ ಮಾರ್ಗದಲ್ಲಿ ಹೋಗುವವರ ಮಾತು ಕಿವಿಗೆ ಬೀಳುತ್ತಿತ್ತು; ಸ್ವಲ್ಪ ಸಮಯದ ಅನಂತರ ಒಬ್ಬನು ಬದರೀಪ್ರಸಾದನಿಗೆ ಸುದ್ದಿ ಹೇಳಲು ಓಡಿದನು. ಒಂದು ತಾಸಿನ ಅನಂತರ ಮಾರ್ಗದ ಮೇಲೆ ಒಂದು ಪೆಟ್ಟಿಗೆಗಾಡಿಯು ಹೋಯಿತು. ಒಂದು ವೇಳೆ ಅದರಲ್ಲಿ ಬದರೀಪ್ರಸಾದನು ಹೋದುದಾಗಿರಬಹುದು. ಅವ ರೊಳಗೆ ಏನು ಮಾತುಕತೆ ನಡೆದಿರಬಹುದು? ಠಾಣೆಗೆ ವರದಿ ಮಾಡಿರ ಬಹುದು. ಸ್ವಲ್ಪ ಹೊತ್ತಿನಲ್ಲಿ ತೋಟದಿಂದ ಇನ್ನೊಂದು ಗಾಡಿಯು ಹೊರ ಡುವ ಸದ್ದು ಕೇಳಿಸಿತು. ಇದರಲ್ಲಿ ಡಾಕ್ಟರರಿರಬಹುದು. ಆದರೆ ಅಂತಹ ಗಾಯವಾಗಿರಲಿಲ್ಲ. ಶ್ರೀಮಂತರ ನೋವಷ್ಟೆ!

ಪೂರ್ಣೆಗೆ ಈಗ ತನ್ನ ಉದ್ದಂಡತೆಗೆ ಪಶ್ಚಾತ್ತಾಪವಾಗತೊಡಗಿತು. ಅವಳು ಸ್ವಲ್ಪ ಜಾಗರೂಕತೆಯಿಂದಿದ್ದರೆ, ಹೀಗಾಗುತ್ತಿದ್ದಿಲ್ಲ. ಸುಮಿತ್ರೆಯು ಇದನ್ನು ಕೇಳಿ ಸಂತಸಪಟ್ಟಾಳು. ಆಕೆಯ ತಾಯಿಗೆ ಮಾತ್ರ ಇದು ಒಳ್ಳೆಯದಾಗಿ ಕಾಣದು.

ಸಂಕದ ಕೆಳಭಾಗವು ಜಾನುವಾರುಗಳ ಗಂಜಳದಿಂದ ತುಂಬಿತ್ತು; ದುರ್ಗಂಧಪೂರಿತವಾಗಿತ್ತು. ಅಲ್ಲಲ್ಲಿ ಹರಿದ ಚಿಂದಿಗಳು, ಮಾವಿನಗೊರಟು, ಕಾಗದ ಚೂರಿನ ರಾಶಿ. ಇಷ್ಟರ ವರೆಗೆ ಪೂರ್ಣೆಗೆ ಈ ದೃಶ್ಯವನ್ನು ನೋಡು ವುದಕ್ಕಾಗಲಿಲ್ಲ. ಇನ್ನು ಅವಳಿಗೆ ಅಲ್ಲಿ ನಿಲ್ಲುವುದು ಅಸಹ್ಯವಾಯಿತು.

ಸುಮಾರು ಮಧ್ಯಾಹ್ನದ ಸಮಯ. ತೋಟದಿಂದ ಬಂದುಹೋಗು ವಿಕೆ ಕಟ್ಟಾಯಿತು. ಈ ನೀರವತೆಯಲ್ಲಿ ಅವಳು ತನ್ನ ಭವಿಷ್ಯವನ್ನು ನಿರ್ಣೈಸುತ್ತಿದ್ದಳು.

ಇನ್ನು ಅವಳಿಗೆ ಆಶ್ರಯವೆಲ್ಲಿ? ಅವಳ ಜೀವನದ ಒಂದು ಬದಿಯನ್ನು ಸೆರೆಮನೆಯ ಕಬ್ಬಿಣದ ಸಲಾಕೆಗಳು ಕೈಯೆತ್ತಿ ಕರೆಯುತ್ತಿದ್ದು, ಮನವನ್ನಳು ಕಿಸುತ್ತಿದ್ದುವು. ಇನ್ನೊಂದೆಡೆಯಿಂದ ಮೃತ್ಯುದೇವತೆಯು ಕರೆಯುತ್ತಿತ್ತು. ಮಧ್ಯದಲ್ಲಿ ಆಹಾರವು ಪ್ರಶ್ನಾರ್ಥಕವಾಗಿ ನಿಂತಿತ್ತು.

ಸಂಧ್ಯಾಕಾಲವು ಕಳೆದು ಕತ್ತಲೆಯು ಕವಿಯೊಡನೆಯೇ, ಪೂರ್ಣೆಯು ಮೆಲ್ಲನೆ ಅಲ್ಲಿಂದ ಮಾರ್ಗಕ್ಕೆ ಬಂದು ಆಲೋಚಿಸತೊಡಗಿದಳು; ಎಲ್ಲಿಗೆ ಹೋಗಲಿ? ಜೀವನದಲ್ಲಿ ಅಪಮಾನ, ಲಜ್ಜೆ, ದುಃಖಗಳ ಹೊರತು ಮತ್ತೇನಿದೆ? ತನ್ನ ಪತಿಯ ಮರಣಾನಂತರ ತಾನೇಕೆ ಪ್ರಾಣವನ್ನು ಕಳೆದುಕೊಳ್ಳಲಿಲ್ಲ? ಅದೇ ದಿನ ನಾನೇಕೆ ಸತಿಹೋಗಲಿಲ್ಲ? ಈ ಬದುಕಿಗಿಂತ ಅದೇ ಮೇಲಾಗಿತ್ತು. ಆ ಸಮಯದಲ್ಲಿ ಬುದ್ಧಿಯೇಕೆ ಭ್ರಷ್ಟವಾಗಿತ್ತು?

ಮಾರ್ಗದಲ್ಲಿ ಬರುವ ವೃದ್ಧನೊಬ್ಬನನ್ನು ಕಂಡು, ಮರದ ಮರೆಯಲ್ಲಿ ನಿಂತಳು. ಆದರೆ ಈ ಮುದುಕನೆದುರು ಕಾಣಿಸಿಕೊಂಡರೆ ಏನೂ ಆಪತ್ತಿಲ್ಲವೆಂದು ತಿಳಿದು, ಎದುರು ಬಂದಳು. "ಮಹಾರಾಯಾ, ಗಂಗಾನದಿಗೆ ಹೋಗುವ ಮಾರ್ಗವಾವುದು?" ಎಂದು ಕೇಳಿದಳು.

ವೃದ್ಧನಿಗೆ ಆಶ್ಚರ್ಯವಾಯಿತು. "ಗಂಗೆಯು ಇಲ್ಲೆಲ್ಲಿ? ಇದು 'ಮಹಾಡಿರ'ವಷ್ಟೆ?" ಎಂದನು.

ಪೂರ್ಣಾ "ಆದರೆ ದೂರವೆಷ್ಟಿದೆ?" ಎಂದು ಪುನಃ ಪ್ರಶ್ನಿಸಿದಳು.

"ಎರಡು ಹರದಾರಿ" ಎಂಬುತ್ತರಬಂದಿತು.

ಈ ದಶೆಯಲ್ಲಿ ಎರಡು ಹರದಾರಿ ನಡೆಯುವುದು ಕಷ್ಟವೆಂದು ಅವಳಿಗನಿಸಿತು. ಆದುದರಿಂದ ಸಮೀಪದಲ್ಲೇ ಎಲ್ಲಾದರೂ ಕೆರೆ, ಕೊಳಗಳಿವೆಯೋ ಎಂದು ತಿಳಿಯುವ ಆಸೆಯಾಯಿತು.

ವೃದ್ಧನು "ನಿನ್ನ ಮನೆಯೆಲ್ಲಿ, ತಾಯಿ?" ಎಂದು ಕೇಳಿದನು.

ಪೂರ್ಣೆಗೀಪ್ರಶ್ನೆಯನ್ನು ಕೇಳಿ, ಏನು ಹೇಳುವುದೆಂದು ತೋರಲಿಲ್ಲ.

ವೃದ್ಧನು "ಗಂಗೆಯಿಂದ ಎಲ್ಲಿಗೆ ಹೋಗಬೇಕಮ್ಮ?" ಎಂದು ಮತ್ತೊಮ್ಮೆ ಕೇಳಿದನು. ಪೂರ್ಣಾ ಏನು ಹೇಳಬೇಕೆಂದು ತಿಳಿಯದವಳಾಗಿ "ಅಲ್ಲೊಂದು ಬೀದಿಗೆ ಹೋಗಬೇಕು" ಎಂದಳು.

"ಯಾವ ಬೀದಿಗೆ?"

ಪೂರ್ಣೆಯು ಮೌನ. ಅವಳ ನಾಲಗೆಯಲ್ಲಿ ಮರುತ್ತರವಿರಲಿಲ್ಲ.

"ಇಲ್ಲಿ ನೀನು ಯಾವ ಗ್ರಾಮದಲ್ಲಿರುವವಳು?"

ಇದಕ್ಕೂ ಪೂರ್ಣೆಯುಮಾತಾಡಲಿಲ್ಲ.

"ನೀನೇಕೆ ನಿನ್ನ ಪರಿಚಯವನ್ನು ಹೇಳುವುದಿಲ್ಲ? ಮನೆಯಿಂದ ಓಡಿ ಬಂದವಳೇನು?" ಎಂದು ಅನುಮಾನಗೊಂಡ ವೃದ್ಧನು ಪುನಃ ಪ್ರಶ್ನಿಸಿದನು.

ಉತ್ತರವಿಲ್ಲ.

ವೃದ್ಧನಿಗೆ ಇವಳು ಮನೆಯಿಂದೋಡಿದವಳೆಂದು ದೃಢವಾಯಿತು; ಅವಳಲ್ಲಿ ದಯೆಯುಂಟಾಯಿತು; "ಮಗಳೇ, ಮನೆಯಿಂದ ಓಡುವುದು ಒಳ್ಳೆಯದಲ್ಲ. ಯಾರದಾದರೂ ಬಲೆಗೆ ಬಿದ್ದೆಯೆಂದಾದರೆ, ಜೀವನವು ಹಾಳಾದೀತು. ಮನೆಗೆ ಹಿಂತಿರುಗು. ಯಾರಾದರೂ ನಿನ್ನ ಬುದ್ಧಿಗಾಗಿ, ನಿನ್ನ ಒಳ್ಳೆಯದಕ್ಕಾಗಿ ಏನಾದರೂ ಹೇಳಿದರೆ, ಹೀಗೆ ಓಡಬಾರದು. ಹೋಗುವ, ನಾನು ನಿನ್ನನ್ನು ಮನೆಗೆ ಮುಟ್ಟಿಸುವೆನು" ಎಂದನು.

ಪೂರ್ಣೆಗೀಗ ಮಾತಾಡದೆ ಗತ್ಯಂತರವಿಲ್ಲವಾಯಿತು; "ನನ್ನನ್ನು ಮನೆಯವರು ಹೊರಡಿಸಿದರು." ಎಂದು ಮೆಲ್ಲನೆಂದಳು.

"ಯಾಕೆ? ಯಾರೊಡನಾದರೂ ಜಗಳವಾಗಿತ್ತೇ?"

"ಇಲ್ಲಪ್ಪ. ನಾನು ವಿಧವೆ. ಮನೆಯವರು ನನ್ನನ್ನಿಟ್ಟುಕೊಳ್ಳುವುದಿಲ್ಲ."

"ಅತ್ತೆ ಮಾವಂದಿರಿರುವರೆ?"

"ಯಾರೂ ಇಲ್ಲ."

"ಹಾಗಾದರೆ ನೀನು ಗಂಗೆಯ ದಾರಿಯನ್ನೇಕೆ ಕೇಳಿದೆ? ಅಲ್ಲಿ ಯಾರಾದರೂ ಇರುವರೆ?"

"ಇಲ್ಲ. ರಾತ್ರಿ ಅಲ್ಲಿ ಕಳೆದು, ಬೆಳಗ್ಗೆ ಎಲ್ಲಿಯಾದರೂ ಕೆಲಸಕ್ಕೆ ನಿಲ್ಲಬೇಕೆಂದಾಶೆ."

"ವನಿತಾಭವನದಲ್ಲಿ ಸೇರಿಕೊಳ್ಳಬಹುದಲ್ಲ?"

"ನಾನು ಆ ಹೆಸರನ್ನೇ ಕೇಳಲಿಲ್ಲ."

"ಅಲ್ಲಿ ಅನಾಥ ಸ್ತ್ರೀಯರ ಪಾಲನೆಯಾಗುತ್ತದೆ. ಎಂತಹ ಸ್ತ್ರೀಯಾದರೂ ಅಲ್ಲಿಯವರು ಹರ್ಷದಿಂದ ಸೇರಿಸಿಕೊಳ್ಳುವರು, ಬಾಬು ಅಮೃತರಾಯರು ಮಾಡಿದ ಕೆಲಸಕ್ಕೆ ಪ್ರಪಂಚವೇ ತಲೆತಗ್ಗಿಸಬೇಕು. ಹೇಳುವವರೇನುಬೇಕಾದರೂ ಹೇಳಿಕೊಳ್ಳಲಿ. ಈಗ ಅಲ್ಲಿ ಏನೆಂದರೂ ಒಂದು ಇಪ್ಪತ್ತೈದು ಸ್ತ್ರೀಯರಿರುವರು. ಎಲ್ಲರ ಮುಖದಲ್ಲೂ ಸಂತೋಷವು ಲಾಸ್ಯವಾಡುತ್ತದೆ. ಯಾವ ಗಂಡುಸೂ ಅಲ್ಲಿ ಪ್ರವೇಶಿಸಲಾಗದು. ಸ್ವತಃ ಅಮೃತರಾಯರೇ ಒಳಗೆ ಪ್ರವೇಶಿಸುವುದಿಲ್ಲ. ಅವರ ತ್ಯಾಗಕ್ಕೆ ಮಾನವವರ್ಗವಿಡೀ ಸೋಲಬೇಕು."

ಪೂರ್ಣೆಯ ಹೃದಯ ಕುಗ್ಗಿತು. ಯಾವ ಆಪತ್ತನ್ನು ತಪ್ಪಿಸಿಕೊಂಡು ಓಡಿಬಂದಿದ್ದಳೊ, ಅದೇ ಈಗ ಪುನಃ ಸಮೀಪಿಸುತ್ತಿದೆ. ಅಮೃತರಾಯನು ನೋಡಿದೊಡನೆಯೇ ತನ್ನನ್ನು ಗುರುತಿಸಿಯಾನು. ಅವನೆದುರು ಹೇಗೆ ನಿಲ್ಲಲಿ?

"ತಡವೇಕೆ? ನಾನೇ ನಿನ್ನನ್ನಲ್ಲಿಗೆ ತಲಪಿಸುವೆನು. ಧೈರ್ಯದಿಂದಿರು. ನಿನಗೆ ಅಲ್ಲಿ ಯಾವ ತೊಂದರೆಯೂ ಇಲ್ಲ."

"ನಾನಲ್ಲಿಗೆ ಹೋಗಲಾರೆ."

"ತೊಂದರೆಯೇನು?"

"ನನ್ನ ಮನಸ್ಸು ಕೇಳುವುದಿಲ್ಲ."

"ಅಂದರೆ ನಿನ್ನ ತಲೆಯಲ್ಲಿ ಬೇರೇನೋ ಇರಬೇಕು."

ಹೀಗೆ ಹೇಳಿ ಮುದುಕನು ಮುಂದಕ್ಕೆ ಹೊರಟನು. ಮನಸ್ಸಿನಲ್ಲಿ "ದುರ್ಮಾರ್ಗದಲ್ಲಿ ಹೋಗಬೇಕೆಂದು ತಲೆಯಲ್ಲಿ ಬರೆದುದನ್ನು ತಪ್ಪಿಸುವವರಾರು?" ಎಂದು ಗ್ರಹಿಸಿಕೊಂಡನು.

ವೃದ್ಧನು ಮುಂದೆ ಹೋಗುವುದನ್ನು ಕಂಡು ಪೂರ್ಣೆಯು ಹೆದರಿದಳು; "ಅಪ್ಪಾ, ನೀನು ಕೂಡ ನನ್ನನ್ನು ತೊರೆದುಹೋಗುವೆಯಾ?"

"ವನಿತಾಭವನಕ್ಕೆ ಸೇರಿಸುವೆ ಎಂದುದಲ್ಲವೆ? ನೀನು ಹೇಳಿದುದನ್ನು ಕೇಳದಿದ್ದರೆ ನಾನೇನು ಮಾಡಲಿ?"

"ಅಲ್ಲಿ ಅಮೃತರಾಯನೆದುರು ಬೀಳಬೇಕಾಗಿಲ್ಲವಷ್ಟೆ?"

"ಹೇಳಲು ಸಾಧ್ಯವಿಲ್ಲ. ಒಂದು ವೇಳೆ ಹಾಗಾದರೆ ನಿನಗೆ ತೊಂದರೆಯೇನು? ಅವನೇನು ಕೆಟ್ಟವನಲ್ಲ."

"ಒಳ್ಳೆಯದು ಕೆಟ್ಟುದರ ವಿಷಯವಲ್ಲ. ನನಗೆ ಅವನೆದುರು ಹೋಗುವುದಕ್ಕೆ ನಾಚಿಕೆಯಾಗುವುದು."

"ಆಗಲಿ, ನೀನು ಹೋಗುವುದು ಬೇಡ. ಹೆಸರನ್ನಾದರೂ ತಿಳಿಸು."

"ಹೆಸರು ಬರೆಯಿಸಲನುಕೂಲವಿಲ್ಲ. ಅದಕ್ಕೇ ನಾನಲ್ಲಿ ಸೇರುವುದಿಲ್ಲವೆಂದುದು."

ವೃದ್ಧನು ಸ್ವಲ್ಪ ಹೊತ್ತು ಯೋಚಿಸಿ, "ಸರಿ, ನಾನು ಅವನನ್ನು ಸಮಾಧಾನಪಡಿಸುವೆನು. ನೀನು ಮರೆಮಾಡಲಿಚ್ಛಿಸುವುದನ್ನು ಅವನು ಕೇಳಲಾಶಿಸನು" ಎಂದನು.

ಸ್ವಲ್ಪ ದೂರದಲ್ಲಿಯೇ ಅವರಿಗೊಂದು ಗಾಡಿ ದೊರೆಯಿತು. ಇಬ್ಬರೂ ಅದರಲ್ಲಿ ಕುಳಿತು ಹೋದರು. ಆದರೆ ಅವಳ ಮನಸ್ಸಿನ ಶಂಕೆ, ದುಃಖಗಳು ತೊಲಗಲಿಲ್ಲ.

---

ದಾನಾನಾಥನು ಮಧ್ಯಮ ಸ್ವಭಾವದವನಲ್ಲ. ಒಬ್ಬನಲ್ಲಿ ಆಗದೆಂದರೆ ಕಡುವೈರ. ಸ್ನೇಹವೆಂದರೆ, ಅವನ ದಾಸನಾಗುತ್ತಿದ್ದನು. ಈಗ ಕಮಲಾ ಪ್ರಸಾದನೊಂದಿಗೆ ಗೆಳೆತನವಾದ ಮೇಲೆ, ಅವನ ಮಾತೆಂದರೆ ಇವನಿಗೆ ವೇದವಾಕ್ಯ. ಹಾಗಾಗಿ ಅಮೃತರಾಯನೊಡನೆ ವೈರವುಂಟಾಯಿತು. ಆ ದ್ವೇಷಸಾಧನೆಯ ಯೋಚನೆಯಲ್ಲೇ ಈತನು ದಿನಗಳೆಯುತ್ತಿದ್ದನು. ಅವನ ವಿರುದ್ಧ ಯಾವಾಗಲೂ ಭಾಷಣ ಮಾಡುತ್ತಿದ್ದನು. ಪ್ರೇಮಕುಮಾರಿಯು ಸಭಾಭವನದಲ್ಲಿ ಇವನ ಪ್ರಯತ್ನವನ್ನು ಹಾಳ್ಗೆಡವಿದಂದಿನಿಂದ, ಇವನು ಅಮೃತರಾಯನ ಬದ್ಧವಿರೋಧಿಯಾದನು. ಪ್ರೇಮಕುಮಾರಿಯೊಡನೆ ಮೊದಲೇ ಸರಿಯಿದ್ದಿಲ್ಲ. ಈಗಂತೂ ಕೇಳುವುದೇ ಬೇಡ.

ಸಂಧ್ಯಾಕಾಲ. ಕಮಲಾಪ್ರಸಾದನನ್ನು ಕಾಯುತ್ತಾ ದಾನಾನಾಥನು ಕುಳಿತಿದ್ದನು. ಇನ್ನು ಅವನು ಬರುವಂತಿಲ್ಲ. ಆದುದರಿಂದ ತಾನೇ ಅವನ ಮನೆಗೆ ಹೋಗುವುದೆಂದು ಹೊರಡುವಾಗ, ಬೇರೊಬ್ಬ ಮಿತ್ರನು ಬಂದು, ತೋಟದಲ್ಲಾದ ದುರ್ಘಟನೆಯನ್ನು ಹೇಳಿದನು. ದಾನಾನಾಥನಿಗೆ ಈ ವಿಷಯದಲ್ಲಿ ವಿಶ್ವಾಸವುಂಟಾಗಲಿಲ್ಲ.

"ನೀನು ಈ ಸುಳ್ಳುಸುದ್ದಿಯನ್ನೆಲ್ಲಿಂದ ತಂದೆ?"

"ನಗರದಲ್ಲೇ ಈ ಮಾತು ಹಬ್ಬಿದೆಯೆಂದ ಮೇಲೆ?"

"ಏನಾಯಿತದರಲ್ಲಿ? ಯಾರೋ ಅಪವಾದದ ಗಾಳಿಯನ್ನು ಬೀರಿದು ದೇಕಾಗಿರಬಾರದು. ಕಮಲಾಪ್ರಸಾದನು ಅಂಥವನಲ್ಲವೇ ಅಲ್ಲ. ನನಗವನ ಪರಿಚಯವಿದ್ದಷ್ಟು ಬೇರೆ ಯಾರಿಗೂ ಇಲ್ಲ."

"ಕಮಲಾಪ್ರಸಾದನಿಗೆ ಚಿಕಿತ್ಸೆ ಮಾಡಿದ ಡಾಕ್ಟರರೇ ನನಗೆ ಹೇಳಿ ದುದು. ಅವರಿಗೆ ಇವರ ಮೇಲೆ ವೈರವಿರಲಾರದಷ್ಟೆ?"

"ಡಾಕ್ಟರರೇನೆಂದರು?"

"'ಮುಖಕ್ಕೂ ಎದೆಗೂ ಪೆಟ್ಟಾಗಿದೆ; ಎರಡು ಹಲ್ಲುಗಳೂ ಮುರಿ ದಿವೆ' ಎಂದರು."

"ಅಂತಹ ಗಾಯವಾದವನು ಲಂಪಟನಿರಲೇ ಬೇಕು."

ದಾನಾನಾಥನಿಗೆ ಕಮಲಾಪ್ರಸಾದನ ಮನೆಗೆ ಹೋಗಿ, ಇದರ ಶೋಧ ಮಾಡುವ ವರೆಗೂ ನಂಬಿಕೆಯಾಗಲಿಲ್ಲ. ಕಮಲಾಪ್ರಸಾದನು ಹಾಸಿಗೆಯ ಮೇಲೆ ಮಲಗಿದ್ದನು. ಅವನ ಗಾಯಗಳಿಗೆ ಕಟ್ಟಿದ ಪಟ್ಟಿಯನ್ನು ನೋಡು

ವಾಗ ಅವನಿಗೆ ಗುಂಡು ತಾಗಿದಂತೆ ಕಾಣುತ್ತಿತ್ತು. ದಾನಾನಾಥನ ಮಾತು ಕೇಳಿದೊಡನೆಯೇ ಕಣ್ಣು ತೆರೆದು ನರಳುತ್ತಾ ಮಾತಿಗಾರಂಭಿದನು; "ಬನ್ನಿರಿ ನಿಮಗೆ ಈಗಲೇ ತಿಳಿಯಿತೇನು? ವಿಷಗಳಿಗೆಯಲ್ಲಿ ಏನೆಲ್ಲಾ ಬಂದ್ಪುಬಿಡುತ್ತದೆ!"

"ಈಗ ತಾನೇ ನನಗೆ ತಿಳಿಯಿತು. ಸಂಗತಿಯೇನು?"

"ಏನು ಹೇಳಲಿ? ಅವಳು ಹೀಗೆ ಮಾಡಿಯಾಳೆಂದು ಯಾರಿಗೆ ಗೊತ್ತು? ಮನೆಮನೆ ಯಾಚಿಸಬೇಕಾದಾಗ ನಾನಿಲ್ಲಿಗೆ ಕರೆದು ತಂದೆ. ನನ್ನ ತಂಗಿಯೆಂದೇ ತಿಳಿದುಕೊಂಡಿದ್ದೆ. ಎಷ್ಟೋ ದಿವಸಗಳಿಂದ 'ನಿಮ್ಮ ತೋಟವನ್ನೊಮ್ಮೆ ತೋರಿಸಿರಿ' ಎಂದುಕೊಂಡಿದ್ದಳು. ಇಂದವಳನ್ನು ತೋಟದ ಬಳಿ ಕರೆದುಕೊಂಡು ಹೋಗುವಾಗ ಹೇಳುವುದೇನು? ಬಾಗಿಲಲ್ಲೇ ಡೊಣ್ಣೆ ಹಿಡಿದು ಇಬ್ಬರು ಪೋಲಿಗಳಿದ್ದರು. ನನ್ನನ್ನು ನೋಡಿದೊಡನೆಯೇ ಇಬ್ಬರೂ ಮೇಲೆ ಬಿದ್ದರು. ನಾನೊಬ್ಬನೇ ಏನು ಮಾಡಲಿ? ಆ ಪಿಶಾಚಿಯು ಅವರೊಡನೆ ಸೇರಿದಳು. ನಾನು ಯಾರನ್ನು ಕರೆಯಲಿ? ಅಲ್ಲಿ ಯಾರೂ ಇದ್ದಿಲ್ಲ. ಅವನ ಪೆಟ್ಟನ್ನು ತಡೆಯಲಾರದೆ, ಸ್ಮೃತಿತಪ್ಪಿ ಬಿದ್ದಮೇಲೆ, ಅವರು ಅಲ್ಲಿಂದ ಓಡಿದರು. ಅವಳು ಅಮೃತರಾಯನ ಪಕ್ಷದವಳೆಂದು ತಿಳಿದಿದ್ದರೆ, ನಮ್ಮ ಮನೆಗೆ ತರುತ್ತಲೇ ಇದ್ದಿಲ್ಲ."

ದಾನಾನಾಥನು ಒಂದು ಕ್ಷಣ ಆಲೋಚಿಸಿ, "ಅಮೃತರಾಯನು ಇಂತಹ ಸ್ವಭಾವದವನಾಗಿದ್ದಿಲ್ಲವಷ್ಟೆ!" ಎಂದನು.

"ಮನುಷ್ಯನ ಹೃದಯದಲ್ಲಿ ಏನೆಲ್ಲಾ ಅಡಗಿದೆಯೆಂದು ಹೇಳಲು ಬ್ರಹ್ಮನಿಗೂ ಸಾಧ್ಯವಿಲ್ಲ. ಸಾಧು . . . . " ಕಮಲಾಪ್ರಸಾದನ ಮಾತು ಮುಗಿಯುವಷ್ಟರಲ್ಲಿ ಲಾಲಾ ಬದರೀಪ್ರಸಾದನು ಒಳಗೆ ಪ್ರವೇಶಿಸಿದನು. ಕೂಡಲೇ, "ಹೀಗೆನ್ನಲು ನಾಚಿಕೆಯಾಗುವುದಿಲ್ಲವೆ? ನೀನೆಲ್ಲಿಯಾದರೂ ಮುಳುಗಿ ಸಾಯುವುದೇ ಲೇಸಿತ್ತು. ಆದರೆ ನಿನ್ನಂತಹ ಪಾಪಿಗಳಿಗಷ್ಟು ಆತ್ಮಾಭಿಮಾನವಿರಬೇಕಲ್ಲ? ಯಾರ ತೊಡೆಯಲ್ಲಿ ನೀನಾಡಿ ಬಳೆದೆಯೋ ಅವನಿಗೂ ಕೀರ್ತಿಯನ್ನು ತಂದೆ. ಪ್ರಪಂಚವನ್ನು ತಿಳಿದ ನನ್ನಂಥವನನ್ನೂ ಮೋಸಪಡಿಸಿದೆ. ನೀನಿಷ್ಟು ಭ್ರಷ್ಟಚರಿತ್ರನಾಗುವೆಯೆಂದು ತಿಳಿದಿದ್ದರೆ, ನಿನಗೆ ವಿಷವನ್ನಿಕ್ಕುತ್ತಿದ್ದೆ. ನಿನ್ನ ಸಚ್ಚರಿತೆಗಾಗಿ ನನಗೆ ಅಭಿಮಾನವಿತ್ತು. ನಿನ್ನಲ್ಲಿ ಎಷ್ಟು ದೋಷಗಳಿದ್ದರೂ ನಿಷ್ಕಲಂಕ ಚರಿತ್ರೆಯೊಂದಿದೆಯಲ್ಲಾ ಎಂದು ತೃಪ್ತನಾಗಿದ್ದೆ. ಆದರೆ ಈಗ ನಿನ್ನಷ್ಟು ನೀಚ, ಅಧಮ ಪ್ರಾಣಿಗಳು ಯಾರೂ ಇರಲಾರರು ಎಂದು ತಿಳಿಯಿತು. ನಾನು ಮನೆಯಲ್ಲಿ ಆಶ್ರಯವಿತ್ತ ಅನಾಥೆಯ ಮೇಲೆ, ನೀನು ತಂಗಿಯೆಂದು ಯಾರನ್ನು ಕರೆಯುತ್ತಿದ್ದೆಯೋ ಅವಳ ಮೇಲೆ, ನಿನ್ನ

ವಕ್ರದೃಷ್ಟಿ! ಅವಳು ನಿನ್ನನ್ನು ಕೊಲ್ಲದೆ ಬಿಟ್ಟಳೇಕೆ? ನಿನ್ನಂತಹನಿಗೆ ಈ ದಂಡವೇ ಉಚಿತ" ಎಂದು ಬುಸುಗುಟ್ಟಿದನು.

ದಾನಾನಾಥ– ಅವನ ಅಭಿಪ್ರಾಯ ಪ್ರಕಾರ ಅಮೃತರಾಯ . . . .

ಬದರೀಪ್ರಸಾದ– ಸುಳ್ಳು. ಖಂಡಿತವಾಗಿ ಸುಳ್ಳು. ಹದಿನಾರಾಣೆ ಸುಳ್ಳು. ಅಮೃತರಾಯನಲ್ಲಿ ಸಾಮಾಜಿಕ ಅಭಿಪ್ರಾಯದಲ್ಲಿ ನನಗೆ ಭೇದ ವಿದ್ದರೂ ಅಂತಹ ಪುಣ್ಯಶ್ಲೋಕನು ಈ ಪ್ರಪಂಚದಲ್ಲಿ ಸಿಗಲಾರನು. ನೀನವನ ಬಾಲ್ಯಮಿತ್ರನಷ್ಟೆ? ನಾನು ಹೇಳಿದುದರಲ್ಲಿ ಅಧಿಕವಿದೆಯೇ, ನೀನೇ ಹೇಳು.

ದಾನಾನಾಥನಿಗೆ ತನ್ನ ಸ್ಪಷ್ಟಾಭಿಪ್ರಾಯವನ್ನು ಹೇಳದೆ ಮಾರ್ಗವಿಲ್ಲ ವಾಯಿತು. "ನೀವೆಂದುದರಲ್ಲಿ ಒಂದಿಷ್ಟೂ ಅಧಿಕವಿಲ್ಲ" ಎಂದನು.

ಬದರೀಪ್ರಸಾದನು ತನ್ನ ಮಗನ ಕಡೆ ಬೆರಳು ತೋರಿಸಿ "ಇವನ ಮುಖಕ್ಕೆ ಹೊಡೆಯಬಾರದೆ? ಇನ್ನು ಕೂಡ ನಾಚಿಕೆಯಾಗುವುದಿಲ್ಲ. ಈಗ ಎರಡು ಹಲ್ಲು ಮಾತ್ರ ಮುರಿದಿದೆ. ಅದೇನು ದೊಡ್ಡದಲ್ಲ. ನಿಜವಾದ ಪೆಟ್ಟು ಇನ್ನೂ ಬೀಳಲಿದೆಯಷ್ಟೆ. ಎಲ್ಲರೂ ಮುಖದ ಮೇಲೆ ಉಗುಳುವಾಗ ತಿಳಿದೀತು. ನನಗೆ ಕೂಡ ಕೀರ್ತಿಯನ್ನು ಗಳಿಸಿದನು. ನಾನು ಯಾವ ಮೋರೆಯಿಂದ ಮನೆಹೊರಡಲಿ ಎಂಬುದೇ ಚಿಂತೆ" ಎನ್ನುತ್ತಾ ಕೋಣೆಯಿಂದ ನಡೆದುಬಿಟ್ಟನು. ಅವನೊಂದಿಗೆ ದಾನಾನಾಥನೂ ಹೋದನು. ಕಮಲಾ ಪ್ರಸಾದನಿಗೂ ಕುಲಮರ್ಯಾದೆಯು ಮಹತ್ವದ್ದಾಗಿತ್ತು. ಅವನು ಅದನ್ನೇ ಯೋಚಿಸುತ್ತಾ ಕಣ್ಣು ಮುಚ್ಚಿಕೊಂಡು ಬಿದ್ದುಕೊಂಡನು. ನಿಜವಾಗಿ ತಾನಿನ್ನು ಮುಖ ತೋರಿಸುವುದು ಹೇಗೆ ಎಂಬುದೇ ಅವನ ಚಿಂತೆ.

ದಾನಾನಾಥನಿಗೆ ಮನೆಮಠವನ್ನೆಲ್ಲಾ ತ್ಯಜಿಸಿ ಪರವೂರಿಗೆ ನಡೆದುಬಿಡು ವನೋ ಎನ್ನಿಸಿತು. ಕಮಲಾಪ್ರಸಾದನು ತನ್ನೊಟ್ಟಿಗೆ ದಾನಾನಾಥನನ್ನೂ ಕಟ್ಟಿಕೊಂಡಿದ್ದನು. ಜನತೆಯ ದೃಷ್ಟಿಯಲ್ಲಿ ಅವರಿಬ್ಬರೂ ಅಭಿನ್ನರಾಗಿದ್ದರು. ಯಾರು ಯಾವ ಕಾರ್ಯವನ್ನು ಮಾಡಿದರೂ, ಯಶಾಪಯಶಗಳು ಇಬ್ಬರ ಪಾಲಿನವು. ಇಂದಿನಿಂದಲೇ ತನ್ನ ಸಾರ್ವಜನಿಕಜೀವನದ ಅಂತ್ಯವೇನು? ಈ ಕಲಂಕದಿಂದ ಅವನು ಬೇರೆಯಾಗಿರಬಹುದೇ?

ಕಮಲಾಪ್ರಸಾದನು ಇಷ್ಟು ಕುಟಿಲ, ಭ್ರಷ್ಟ ಮತ್ತು ನೀಚನೆಂದಾದ ಮೇಲೆ ಇನ್ನಾರಲ್ಲಿ ವಿಶ್ವಾಸವಿಡಲಿ? ಅಂಥ ಧರ್ಮಾನುಯಾಯಿಯು ಹೀಗೆ ಪತಿತನಾದ ಮೇಲೆ ಇತರರ ಮೇಲೇನು ಆಶೆ? ಶೀಲ ಮತ್ತು ಪರೋಪಕಾರ ಗಳ ಪ್ರತಿಮೂರ್ತಿಯಾದವನು ಇಷ್ಟು ಕಾಮಾಂಧನೇಕಾದ? ಈ ಸಂಸಾರ ದಲ್ಲಿ ಸತ್ಯ ನಿಷ್ಕಪಟತೆಯೆಂಬುದು ಇಲ್ಲವೇನು?

ಮನೆಗೆ ತಲಪಿದೊಡನೆಯೇ “ನೀವು ಕೂಡ ಅಣ್ಣನ ವಿಷಯದ ಮಾತುಗಳನ್ನು ಕೇಳಿರುವಿರೇನು?” ಎಂಬ ಪ್ರೇಮಕುಮಾರಿಯ ಪ್ರಶ್ನೆಯೇ ಅವನನ್ನು ಸ್ವಾಗತಿಸಿತು. ಅವಳು “ಈ ಕೆಲಸದವಳು ಇಂತಹ ಸುಳ್ಳು ಸುದ್ದಿಯನ್ನು ಎಲ್ಲಿಂದ ತಂದಳೋ? ನನಗೇನೂ ವಿಶ್ವಾಸವುಂಟಾಗುವುದಿಲ್ಲ” ಎಂದು ಮಾತು ಮುಂದುವರಿಸಿದಳು.

“ಯಾಕೆ ವಿಶ್ವಾಸವಾಗುವುದಿಲ್ಲ?”

“ನೀವೇನಾದರೂ ಕೇಳಿರುವಿರೆ?”

“ಅಲ್ಲಿಂದಲೇ ಬರುವುದೀಗ. ನಾನೂ ಕೇಳಿರುವೆನು.”

“ಅಣ್ಣನು ಪೂರ್ಣೆಯನ್ನು ತೋಟಕ್ಕೆ ಕರೆದೊಯ್ದುದು ನಿಜವೇ?”

“ನಿಜ.”

“ಅವಳು ಅಲ್ಲಿ ಅಣ್ಣನಿಗೆ ಹೊಡೆದುದು?”

“ಅದೂ ನಿಜ.”

“ನಿಮಗೆ ಹೇಳಿದವರಾರು?”

“ನಿನ್ನ ತಂದೆಯವರೇ!”

“ಹಾಗಾದರೆ ಅದು ಸುಳ್ಳು. ಅವರಿಗೆ ಅಣ್ಣನೊಡನೆ ಸರಿಯಿಲ್ಲ.”

“ಏನು? ಅವರು ನಿನ್ನಣ್ಣನ ಮೇಲೆ ಸುಳ್ಳು ಹೇಳಿಯಾರೆ?”

“ಹಾಗೆ ನಾನು ಹೇಳುವುದಿಲ್ಲ. ಆದರೆ ಅಣ್ಣನು ಅಂಥವನಲ್ಲ.”

“ನಿನಗೆ ಬೇರೆಯವರ ಮನಸ್ಸಿನಲ್ಲಿದ್ದುದೇನು ತಿಳಿಯುವುದು? ನಾನೂ ಮೊದಲು ಹಾಗೆಣಿಸಿದ್ದೆ. ಆದರೆ, ಅನಂತರ ಅವನು ಲಂಪಟನೆಂದು ತಿಳಿಯಿತು. ಪೂರ್ಣೆಯು ಅವನನ್ನು ಕೊಲ್ಲದಿದ್ದುದೇ ತಪ್ಪು. ಇಂತಹ ಪಾಪಿಗಳನ್ನು ಕೊಲ್ಲುವುದೇ ಯೋಗ್ಯ. ಅವಳ ಬದಲಿಗೆ ನಾನಾಗಿದ್ದರೆ ಅವನ ರಕ್ತವನ್ನೇ ಹೀರುತ್ತಿದ್ದೆ. ಪಾಶಿಯಾಗುತ್ತಿದ್ದರೂ ಅಡ್ಡಿಯಿದ್ದಿಲ್ಲ.

ಪ್ರೇಮಕುಮಾರಿಗೆ ಈ ಮಾತು ಅಪ್ರಿಯವಾಯಿತು. ಅವಳಿಗೆ ಇದರ ಯಥಾರ್ಥವು ಇನ್ನೂ ತಿಳಿದಿದ್ದಿಲ್ಲ.

ಅವಳಿಗೆ ಅವನನ್ನೊಮ್ಮೆ ನೋಡಬೇಕೆಂದೆನ್ನಿಸಿತು. ಆದರೆ ದಾನಾನಾಥನೊಡನೆ ಪ್ರಸ್ತಾಪಿಸಲು ಧೈರ್ಯವಾಗಲಿಲ್ಲ. ಒಂದು ಕ್ಷಣ ಕಳೆದ ಬಳಿಕ ದಾನಾನಾಥನೇ “ನಿನಗೆ ಅವನನ್ನು ನೋಡಬೇಕೆಂದಿದ್ದರೆ, ಒಮ್ಮೆ ನೋಡಿ ಬಾ. ಅಷ್ಟೇನು ಪೆಟ್ಟಾಗಲಿಲ್ಲ” ಎಂದನು.

“ನೀವು ನೋಡಿ ಬಂದಿರುವಿರಲ್ಲ? ಇನ್ನು ನಾನೇಕೆ ಹೋಗಲಿ?”

"ಹಾಗಲ್ಲ. ಮತ್ತೆ, ನಿನ್ನನ್ನು ಹೋಗಗೊಡಲಿಲ್ಲವೆಂದು ನನ್ನ ಮೇ
ದೋಷಾರೋಪಣೆಮಾಡುವೆ. ಒಮ್ಮೆ ಹೋಗಿ ನೋಡಿ ಬಾ."

"ನಾನು ನಿಮ್ಮನ್ನು ಎಂದಾದರೂ ದೂರಿದುದಿದ್ದರಷ್ಟೆ? ಸುಮ
ದೋಷವನ್ನು ಹೊರಿಸುವುದೇಕೆ? ನನಗೆ ಹೋಗುವ ಆತುರವೇನೂ ಇಲ್ಲ

"ನಾನು ಹೋಗಬೇಡವೆಂದರೆ ನಿನಗೆ ಹೋಗಬೇಕಾಗುತ್ತಿತ್ತು."

ಇದು ಅಂದಿನ ನಗರಭವನದ ಘಟನೆಯ ಕುರುಹು ಎಂದು ಅವ
ತಳು. ಇಂದಿನ್ನು ಮಾತು ಬೆಳೆಸುವುದು ಯೋಗ್ಯವಲ್ಲ. ಅಂದಿನ ಅ
ರಾಧದ ಉರಿ ಇನ್ನೂ ಆರಿದ್ದಿಲ್ಲ. ಪ್ರೇಮಕುಮಾರಿಯು ಸುಮ್ಮನೆ ತ
ಕೋಣೆಗೆ ನಡೆದಳು.

ದಾನಾನಾಥನ ಮನಸ್ಸಿನ ಜ್ವರವು ಇನ್ನೂ ಇಳಿದಿಲ್ಲ. ಪ್ರೇಮಕುಮಾ
ಯೊಡನೆ ಮಾತಾಡಬೇಕೆಂದು ಕಾಲಪ್ರತೀಕ್ಷೆಯಲ್ಲಿದ್ದನು. ಆದರೆ ಸ
ದರ್ಭವೇ ಸಿಗುತ್ತಿದ್ದಿಲ್ಲ. ಇಂದು ಕೂಡ ಆ ಅವಕಾಶವು ತಪ್ಪಿಹೋಯಿತ
ಸಿಟ್ಟಿನಿಂದ ಹೊರಟುಹೋಗಬೇಕೆಂದಿದ್ದಾಗ ಅವನ ತಾಯಿಯು ಎದು
ಬಂದಳು. "ಮಾವನ ಮನೆಯಲ್ಲೇನೋ ಗಡಿಬಿಡಿಯಂತೆ?" ಎಂದಳು.

ತಾಯಿಯೆದುರು ದಾನಾನಾಥನು ಶ್ವಶುರಗೃಹದ ದೂಷಣೆ ಮಾ
ತ್ತಿದ್ದಿಲ್ಲ. ಆದುದರಿಂದ ನಿಜಸ್ಥಿತಿಯನ್ನು ಸಹಾನುಭೂತಿಯಿಂದ ವ
ಮಾಡಿದನು; "ಎಲ್ಲಾ ಸುಮ್ಮಗೆ."

"ಸುಮ್ಮಗೆ? ಪೇಟೆಯಿಡೀ ಇದೇ ಮಾತು. ಅವಳು ವನಿತಾಭವನ
ಸೇರಿದಳಂತೆ!"

"ವನಿತಾಭವನ? ಅಲ್ಲಿಗೆ ಹೇಗೆ ಹೋದಳು?"

"ಅದು ನನಗರಿಯದು. ಆದರೆ ಅವಳು ಅಲ್ಲಿಗೆ ಹೋದುದು ನಿ
ನಾನು ಮೊದಲಿಂದಲೂ ಕಮಲಾಪ್ರಸಾದನು ಯೋಗ್ಯನಲ್ಲವೆಂದು ತಿಳಿದಿ
ಆದರೆ ನೀನು ಕೇಳಬೇಕಲ್ಲ."

"ಅಮ್ಮಾ, ಯಾರ ಮನೋಭಾವ ಯಾರಿಗೆ ತಿಳಿಯುವುದು?"

"ಕಣ್ಣಿದ್ದವರಿಗೆ ತಿಳಿದೀತು. ಈ ದೋಷ ಅವನಿಗೆ ಮಾತ್ರವ
ನಿನಗೂ ತಟ್ಟಿದೆ. ಅವಳು ಅಲ್ಲಿಗೆ ಹೋಗಿ ಏನೇನು ಮಾತು ಹೇಳುವಳೋ
ಯಾರಿಗೆ ಗೊತ್ತು?"

ಈ ಮಾತಿನಿಂದ ದಾನಾನಾಥನಿಗೇನೋ ಒಂದು ಶಂಕೆಯುಂಟಾಯಿತು
ಅವನು ನೆಟ್ಟಗೆ ಪ್ರೇಮಕುಮಾರಿಯ ಕೋಣೆಯ ಬಳಿ ಹೋಗಿ, "ಕೇ
ದೆಯಾ, ಪೂರ್ಣೆಯು ವನಿತಾಭವನಕ್ಕೆ ಸೇರಿದಳಂತೆ" ಎಂದನು.

ಪ್ರೇಮಕುಮಾರಿಯು ಅವನ ಕಡೆ ನೋಡಿದಳು ಮಾತ್ರ. ಅವಳ ಕಣ್ಣುಗಳು ಕೆಂಪಾಗಿದ್ದುವು. ಅವಳ ಹೃದಯದಲ್ಲಿದ್ದ ಮಾತುಗಳು ಮುಖ ದಿಂದ ಹೊರಡದಾದುವು. ಕರ್ತವ್ಯ ಮತ್ತು ಶಂಕೆಯು ಅವಳನ್ನು ತಡೆದರೂ ಕಣ್ಣೀರು ಹರಿಯುತ್ತಿತ್ತು. ನಗರಭವನಕ್ಕೆ ಹೋದುದು, ಕ್ಷಮಿಸಲಾರ ದಂತಹ ಅಪರಾಧವೇನು? ಅವಳು ಎಲ್ಲಿಗೆ ಹೋಗುವುದಾದರೂ, ಏನು ಮಾಡುವುದಾದರೂ ಅವನಲ್ಲಿ ಕೇಳಿಯೇ ಆಗಬೇಕೇನು? ವಿದ್ಯಾಬುದ್ಧಿಗಳಿರು ವುದರಿಂದ ಅವಳು ಸ್ವತಂತ್ರಳಲ್ಲವೆ? ಏನಾದರೂ ಅನುಚಿತವಾಗುವುದಾದರೆ ಅವನು ತಡೆಯುವುದು ಸಹಜ. ಆ ಸಭೆಗೆ ಹೋದುದು ಅನುಚಿತವೆ?

ದಾನಾನಾಥನು ಅವಳ ಕೆಂಗಣ್ಣುಗಳನ್ನು ನೋಡಿ, ದ್ರವಿತನಾದನು. ತನ್ನ ಕಠೋರತೆಗಾಗಿ ನಾಚಿದನು. ಪ್ರೇಮದ ಪ್ರಗತಿಯು ಕೆಲವು ಸಮಯ ತಡೆದರೂ, ಜಲಪ್ರವಾಹದಂತೆ ತನ್ನ ಗತಿಯನ್ನು ಅದು ಬದಲಿಸಲಾರದು. ಈ ವಿಷಯವನ್ನೇಕೆ ಅವನು ಮರೆತನು? ಒಂದು ಅಚಲ ಸತ್ಯದ ವಿರೋಧ ಮಾಡಿದ ಪ್ರಾಯಶ್ಚಿತ್ತವನ್ನು ಅವನಲ್ಲದೆ ಮತ್ತಾರು ಮಾಡಬೇಕು? ಅವನು ಮಧುರಕಂಠದಿಂದ ಮಾತಾಡಿದನು; "ಪೂರ್ಣೆಯು ವನಿತಾಭವನಕ್ಕೆ ಸೇರಿದ ಳಂತೆ, ಪ್ರೇಮಾ."

ಈ ಸುದ್ದಿಗೆ ಪ್ರಸನ್ನಳಾಗಬೇಕೇ ಖಿನ್ನಳಾಗಬೇಕೇ? ಎಂದು ಪ್ರೇಮಾ ನಿಶ್ಚಯಿಸಿದ್ದಿಲ್ಲ. ಈ ಮಾತನ್ನು ಅವನು ಯಾವ ಉದ್ದೇಶದಿಂದ ಹೇಳಿದನು? ಎಂಬುದೂ ಅವಳಿಗೆ ತಿಳಿಯಲಿಲ್ಲ. ಆದರೆ ದಾನಾನಾಥನೆ ಅವಳ ಮನೋ ಭಾವವನ್ನು ಮುಂದೆ ಮಾತಾಡಿ ಮುರಿದನು. "ಅವಳ ವಿಷಯದ ಚಿಂತೆ ಇನ್ನೇನೂ ಇಲ್ಲ. ಅಮೃತರಾಯನು ಅವಳನ್ನು ಕೈಬಿಡಲಾರ."

ಅವಳಿಗೆ ಪತಿಯ ಈ ಮಾತು ಒಗಟಿನಂತಾಯಿತು. ಇದು ಅಮೃತ ರಾಯನ ಪ್ರಶಂಸೆಯೇ, ಅಥವಾ ನಿಂದೆಯೇ? ಕೈಬಿಡಲಾರನೆಂಬುದು ವ್ಯಂಗ್ಯ ವಾಗಿರಲಾರದಷ್ಟೆ?

ದಾನಾನಾಥನು ಲಜ್ಜಿತನಾಗಿ ಮತ್ತೂ ಹೇಳಿದನು; "ಅಮೃತರಾಯನ ಮೇಲೆ ನನಗಿದ್ದ ಸಂದೇಹವು ಕೇವಲ ಸುಳ್ಳೆಂದು ತಿಳಿಯುತ್ತೇನೆ. ನಾನು ಕಮಲಾಪ್ರಸಾದನ ಮಾತು ವೇದವಾಕ್ಯವೆಂದು ತಿಳಿದಿದ್ದೆ; ಅಮೃತರಾಯನಿಗೆ ಅನ್ಯಾಯ ಮಾಡಿದ್ದೆ. ಈಗ ಅದರ ಅನುಭವವಾಗುತ್ತದೆ. ನನ್ನ ಅನನ್ಯ ಮಿತ್ರನ ಮೇಲೇಕೆ ಸಂದೇಹಪಟ್ಟಿದ್ದೆನೋ ತಿಳಿಯೆ."

ಇದನ್ನು ಕೇಳಿ ಪ್ರೇಮಕುಮಾರಿಯು ಆನಂದಭರಿತಳಾದಳು. ಅವಳ ಮುಖವು ಆನಂದದಿಂದರಳುವುದನ್ನು ಅವನು ಇತ್ತೀಚೆಗೆ ಎಂದೂ ನೋಡಿ

ದ್ದಿಲ್ಲ. "ನಿಮ್ಮನ್ನು ದೂರ ಮಾಡಿದ್ದು ಕೂಡ, ಅಮೃತರಾಯನ ತಪ್ಪು. ಆಗಾಗ ಸಂದರ್ಶನವಾಗುತ್ತಿದ್ದರೆ, ಇಂತಹ ವಿರೋಧವುಂಟಾಗುತ್ತಿದ್ದಿಲ್ಲ. ಆಗಾಗ ನೇಗಿಲು ಹೊಡೆಯದಿದ್ದರಷ್ಟೆ, ಗದ್ದೆಯಲ್ಲಿ ಹುಲ್ಲು ಹುಟ್ಟುವುದು?"

"ಅವನ ತಪ್ಪಲ್ಲ ಪ್ರೇಮಾ; ನನ್ನದೇ ದೋಷ. ಶೀಘ್ರದಲ್ಲೇ ಇದರ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳುವೆನು. ಒಂದು ಸಭೆಯಲ್ಲಿ ಎಲ್ಲಾ ದೋಷಗಳನ್ನು ಒಪ್ಪಿಕೊಳ್ಳುವೆ. ಈ ದುಷ್ಟರ ದುಷ್ಕೃತಿಗಳನ್ನು ಬಯಲಿಗೆಳೆಯುವೆ."

"ಈಗಲೇ ಸತ್ಯವು ಹೊರಗೆ ಬಿದ್ದಿದೆಯಷ್ಟೆ?"

"ಇನ್ನೂ ಇದೆ. ನನ್ನ ಮರ್ಯಾದೆಯನ್ನುಳಿಸಿಕೊಳ್ಳುವುದಕ್ಕೂ ಇದು ಅಗತ್ಯ. ಅವನೊಡನೆ ನನ್ನ ಸಂಬಂಧವೆಲ್ಲಿಯವರೆಗಿತ್ತು ಎಂದು ಜನತೆಗೆ ತೋರಿಸಬೇಕಾಗಿದೆ. ಮೌನದಿಂದಿದ್ದರೆ ನನಗೆ ಹಾನಿಯಾದೀತು. ನನಗೆಷ್ಟು ಮೋಸವಾಯಿತು! ಅವನು ಕುದೃಷ್ಟಿಯನ್ನು ಬೀರುವ ಸಮಯದಲ್ಲಿ ನಾನಿರುತ್ತಿದ್ದರೆ, ಅವನನ್ನು ಕೊಂದೇಬಿಡುತ್ತಿದ್ದೆ."

ಪ್ರೇಮಕುಮಾರಿಯು ಪತಿಯನ್ನು ಶ್ರದ್ಧಾದೃಷ್ಟಿಯಿಂದ ನೋಡತೊಡಗಿದಳು. ಅವನ ಹೃದಯವಿಷ್ಟು ಪವಿತ್ರವಾಗಿದೆಯೆಂದು ಅವಳಿಗಿಂದಿನ ವರೆಗೆ ತಿಳಿದಿದ್ದಿಲ್ಲ. ಇದು ವರೆಗೆ ಅವಳು ಅವನನ್ನು ಕಾಣುತ್ತಿದ್ದ ರೀತಿಯಲ್ಲಿ ಅವನು ಕೃತಘ್ನ, ದ್ವೇಷಿ, ವಿಚಾರಹೀನ, ಕುಟಿಲಮನುಷ್ಯನಾಗಿದ್ದನು. ಆದರೆ ಇಂದು ಅವಳು ಅವನ ಶುದ್ಧ ನಿರ್ಮಲಾಂತಃಕರಣವನ್ನು ಕಂಡಳು. ಎಂತಹ ಪಶ್ಚಾತ್ತಾಪ! ಎಂತಹ ಪವಿತ್ರಕ್ರೋಧ! ಒಬ್ಬ ಅಬಲೆಗೆ ಎಷ್ಟು ಸನ್ಮಾನ!!

"ನನ್ನ ಅಭಿಪ್ರಾಯ ಪ್ರಕಾರ ನೀವೀಗ ಸುಮ್ಮನಿರುವುದೇ ಯೋಗ್ಯ. ಕೆಲವು ದಿನ ಜನರು ನಿಮ್ಮನ್ನು ದೂರಿದರೂ, ಕೊನೆಗೆ ನಿಮ್ಮನ್ನೇ ಪೂಜಿಸಿಯಾರು! ನೀವೀಗ ಅಣ್ಣನನ್ನು ವಿರೋಧಿಸಿದರೆ, ತಂದೆಯವರಿಗೆ ಸೀಮಾತೀತವ್ಯಸನವಾದೀತು."

"ನಿನ್ನ ಅಭಿಪ್ರಾಯದಂತೆಯೇ ಆಗಲಿ. ಆದರೆ ನಾನು ಖಂಡಿತ ಹೊರಗೆ ಮುಖ ತೋರಿಸಲಾರೆ."

ಪ್ರೇಮಕುಮಾರಿಯು ಪತಿಯನ್ನು ಪ್ರೇಮದಿಂದ ನೋಡಿದಳು. ಮುಖದಿಂದ ಯಾವ ಮಾತೂ ಹೊರಡಲಿಲ್ಲ. ಪತಿಯ ತ್ಯಾಗ ಅವಳನ್ನು ಸೋಲಿಸಿತು. ಅವಳ ಸಂಕೇತದಂತೆ, ಅಪಮಾನ, ನಿಂದೆ, ಅನಾದರವನ್ನು ಸಹಿಸಲು ಸಿದ್ಧನಾಗಿ, ಅವನು ಅವಳ ಹೃದಯದಲ್ಲಿ ಅಧಿಕಾರವನ್ನು ಪಡೆದನು.

ಹೃದಯದಲ್ಲಿ ಅಧಿಕಾರವನ್ನು ಕೊಡುವ ಶಕ್ತಿಯು ತ್ಯಾಗಕ್ಕೆ ಮಾತ್ರವಿದೆ.

---

ಎಲ್ಲೆಲ್ಲಿಯೂ ಕಮಲಾಪ್ರಸಾದನದೇ ಮಾತು. ಅಂತ್ಯದಲ್ಲಿ ದಾನಾನಾಥನ ಪ್ರಸ್ತಾಪವೂ ಬರುತ್ತಿತ್ತು. "ಅತ್ಯಂತ ಮಿತ್ರನಿಗೆ ತಿಳಿಯದೆ, ಈ ಕುಚಕ್ರದ ರಚನೆಯಾದೀತೆ?" ಎಂದು. ಕಮಲಾಪ್ರಸಾದನಾದರೂ ಶ್ರೀಮಂತ. ಅವನ ಜೀವನಕ್ರಮವನ್ನು ಕಠೋರ ಶಾಸನದಿಂದ ತಿದ್ದ-ಬರುವುದಿಲ್ಲ. ಅಂತಹ ಶ್ರೀಮಂತರು ದುರ್ವ್ಯಸನಿಗಳಾಗುವುದೊಂದು ಹೊಸ ಮಾತಲ್ಲ. ಮೊದಲೇ ಅವನ ಮೇಲೆ ಇಂತಹ ಮಾತುಗಳೇಳುತ್ತಿದ್ದರೆ, ಇಂದು ಇದು ಯಾರಿಗೂ ಮಹತ್ವದ್ದೆನಿಸುತ್ತಿದ್ದಿಲ್ಲ. ಇಂತಹ ಕಾಂಡಗಳು ನಿತ್ಯ ಎಷ್ಟೋ ನಡೆಯುತ್ತವೆ. ನಾಯಕಮಂಡಳಿಗೆ ಸೇರಿದ ಮೇಲೆ, ನಿಯಮಗಳು ತಿದ್ದಲ್ಪಡುತ್ತವೆ. ನಾಯಕರ ಆಹಾರ–ವ್ಯವಹಾರ, ಸ್ಥಿತಿಗತಿ, ಎಲ್ಲಾ ಆಲೋಚನಾಸ್ಪದವಾಗುತ್ತದೆ. ಅವರ ವ್ಯಕ್ತಿತ್ವವನ್ನು ಆದರ್ಶದ ಒರೆಗಲ್ಲಲ್ಲಿ ತಿಕ್ಕಬೇಕಾಗುತ್ತದೆ. ಕಮಲಾಪ್ರಸಾದನಂತೂ ಆ ನಾಯಕಶ್ರೇಣಿಗೆ ಬಂದಿಲ್ಲ. ಅವನಿಗೆ ಸಿಗುತ್ತಿದ್ದ ಪೂಜೆಪುರಸ್ಕಾರಗಳು ದಾನಾನಾಥನಂತಹ ವಿದ್ವಾಂಸ ಪ್ರತಿಭಾಶಾಲಿ, ಸಚ್ಚರಿತ್ರಮನುಷ್ಯರಿಂದಾಗಿ. ಅವನಲ್ಲೇನಾದರೂ ಪ್ರಭೆಯಿದ್ದರೆ, ಅದು ಪ್ರತಿಬಿಂಬ ಮಾತ್ರ. ಅಂತೆಯೇ ಅವನ ಕೃತ್ಯಗಳ ಉತ್ತರದಾಯಿತ್ವವು ಅವನ ಮಿತ್ರನ ಮೇಲಿರುವುದು. ಅಂದ ಮೇಲೆ ದಾನಾನಾಥನು ಇದರಿಂದ ತಪ್ಪಿಸಿಕೊಳ್ಳುವುದೆಂತು?

ನಾಲ್ಕಾರು ದಿನಗಳ ಮೇಲೆ ಜನರ ದೃಷ್ಟಿಕೋನದಲ್ಲಿ ಪರಿವರ್ತನವಾಯಿತು. ಕಮಲಾಪ್ರಸಾದನ ಮೇಲೇನೂ ದೋಷವಿಲ್ಲ – ಬರಿಯ ಸಾಧು ಮನುಷ್ಯ. ಅವನ ಕಡಿವಾಣವು ಬೇರೆಯವರ ಕೈಯಲ್ಲಿದೆ. ಅವರು ಅವನನ್ನು ಕುಣಿಸುವುದು ಎಂದು. ಹೀಗಾದ ಮೇಲೆ ಹಚ್ಚುವ ಮಸಿಯೆಲ್ಲ ದಾನಾನಾಥನ ಮುಖಕ್ಕೇನೆ ಸರಿಯಷ್ಟೆ!

ನಿಜವಾಗಿಯೂ ದಾನಾನಾಥನಿಗೆ ಮನೆಯಿಂದ ಹೊರಡುವುದು ಕಠಿನವಾಯಿತು. ಇವನನ್ನು ನೋಡಿದೊಡನೆಯೇ ಜನರೆಲ್ಲರೂ ಮುಖ ತಿರುಗಿಸುತ್ತಿದ್ದರು. ಅವನ ಮಾತನ್ನು ಕೇಳಿ ಜಯಘೋಷದಿಂದ ಆಕಾಶವನ್ನುರುಳಿಸುತ್ತಿದ್ದ ಜನಜಂಗುಳಿಯು ಈಗ ತಮಾಷೆ ಮಾಡುತ್ತಿತ್ತು. ಅವನ ವಿಷಯು, ಕವನ ಕಟ್ಟಿ ಹಾಡುತ್ತಿದ್ದರು. ಕಾಲೇಜಿನ ಹುಡುಗರು ಇದಕ್ಕೆ ಹೊರಗಾದದ್ದಿಲ್ಲ. ಆದುದರಿಂದ ಇಂದು ಅವನಿಗೆ ಕಾಲೇಜಿನಲ್ಲಿ ಇರುವುದಕ್ಕೂ ಸಾಧ್ಯವಾಗಲಿಲ್ಲ. ಕಾಲೇಜಿಗೆ ರಜೆ ಬರೆದು, ಮನೆಗೆ ಬಂದನು.

ಮನೆಗೆ ಬಂದೊಡನೆಯೇ ಪ್ರೇಮಾ ಕೇಳಿದಳು "ಇದೇನು, ಇಂದ
ರಜೆಯೇ?"

"ನಾನೇ ರಜೆಗೆ ಬರೆದು ಬಂದುದು. ಕೆಲವು ದಿನಗಳ ವಿಶ್ರಾಂ
ಬೇಕು."

"ಸ್ವಲ್ಪ ನೀವು ಹವೆ ಬದಲಿಸಿದರೂ ಒಳ್ಳೆಯದು."

"ನೀನಂತೂ ನನ್ನೊಟ್ಟಿಗೆ ಬರುವುದಿಲ್ಲವಲ್ಲ?"

"ನಾನೂ ಬರುವುದೆಂದರೆ ಖರ್ಚೆಷ್ಟಾದೀತು?"

ಅವನು ಕೆಲವು ದಿನ ಮನೆಯಿಂದ ಹೊರಡಲೇ ಇಲ್ಲ. ಕಡೆಗೆ ಪತ್ನಿಯ
ಒತ್ತಾಯದಿಂದ ಕತ್ತಲಾದ ಮೇಲೆ ಮೆಲ್ಲಗೆ ಹೊರಡುತ್ತಿದ್ದನು.

ಒಂದು ದಿನ ಅಲ್ಲಿಗೆ ಸುಮಿತ್ರೆಯು ಬಂದಳು; ಪ್ರಸನ್ನಳಾಗಿದ್ದಳು
"ಈಗ ಅಣ್ಣನೊಡನೆ ನೀನು ಏನೂ ಜಗಳಾಡುವುದಿಲ್ಲವಷ್ಟೆ?" ಎಂದು ಪ್ರೇಮ
ಕುಮಾರಿಯು ಕೇಳಿದಳು.

ನಗುತ್ತಾ, "ಈಗ ಅವರೇ ಸರಿಯಾಗಿರುವರು. ಕೆಟ್ಟ ಹೆಸರು
ಬಂದರೂ ನಡತೆಯು ಸರಿಯಾಯಿತಷ್ಟೆ! ಈಗ ತಿರುಗಾಟವೇನೂ ಇಲ್ಲ
ಮನೆಯಿಂದ ಹೊರಡುವುದೇ ಇಲ್ಲ. ತಮ್ಮ ಕೋಣೆಯಲ್ಲೇ ಇರುವರು
ಈಗ ನಾನೇ ಪ್ರಾಣೇಶ್ವರಿ. ನಾನೇ ಜೀವನಸುಧೆ. ನಾನೇ ಹೃದಯದ ರಾಣಿ
ದಿನಾಲೂ ಹೊಸ ಹೊಸ ಹೆಸರನ್ನಿಡುವರು. ಮೊದಲು ಅವರು ನನ್ನ ಬ
ಯಿರಬೇಕೆನಿಸುತ್ತಿತ್ತು. ಈಗ ಇರುವುದೇ ಹೆಚ್ಚಾಗಿದೆ. ಈಗ ನಾವೊಮ
ಗ್ರಾಮಾಂತರಕ್ಕೆ ತಿರುಗಾಡುವುದಕ್ಕೆ ಹೋಗಬೇಕೆಂದಾಗಿದೆ" ಎಂದಳು.

"ಯಾರೆಲ್ಲ?"

"ನಾವಿಬ್ಬರೂ."

ಅಷ್ಟರಲ್ಲಿ ದಾನಾನಾಥನು ಒಂದು ಪತ್ರದೊಂದಿಗೆ ಬಂದನು. ಏನೊ
ಹೇಳಬೇಕೆನ್ನುವಾಗ ಸುಮಿತ್ರೆಯನ್ನು ನೋಡಿ, "ಸುಮಿತ್ರಾ, ಯಾವಾ
ಬಂದೆ? ನನಗೆ ಗೊತ್ತೇ ಇಲ್ಲ" ಎಂದು ಕೈಯ ಪತ್ರವನ್ನು ಪ್ರೇಮಕುಮಾರಿ
ತೋರಿಸುತ್ತಾ, "ನೋಡು, ಅನ್ಯೃತನ ಕಾಗದ" ಎಂದನು.

"ಏನು ಬರೆದಿದ್ದಾನೆ?" ಎಂದು ಕೇಳಿದಳು.

"ಓದಬಾರದೆ?"

"ಓದುವೆನು. ಏನೋ ವನಿತಾಭವನದ ವಿಷಯ ಬರೆದಿರಬೇಕಲ್ಲ?

"ನನ್ನನ್ನು ಬೈದಿರುವನು. ಓದಿನೋಡಿದರೆ ತಿಳಿಯುವುದು."

ಪ್ರೇಮಕುಮಾರಿಯು ಹುಬ್ಬೇರಿಸಿ, ಪತ್ರವನ್ನು ಬಿಡಿಸಿದಳು. ಮೊದಲ ವಾಕ್ಯವನ್ನು ಓದಿದೊಡನೆಯೇ, ಏರಿದ ಹುಬ್ಬು ಇಳಿಯಿತು. ಎರಡನೆಯ ವಾಕ್ಯದಿಂದ, ಪತ್ರದ ಕಡೆ ಬಗ್ಗಿದಳು. ಮೂರನೆಯ ವಾಕ್ಯದಿಂದ ಅವಳ ಬಿಗಿದಿದ್ದ ಮುಖವು ಸರಲವಾಯಿತು. ಮುಂದಿನ ಮಾತಿನಿಂದ ಅವಳ ತುಟಿಗಳಲ್ಲಿ ಹಾಸ್ಯವಾಡಿತು. ಪತ್ರವನ್ನು ಮುಗಿಸಿದಾಗ ಅವಳ ಮುಖಮಂಡಲವು ಅರಳಿತು. ವಿಮಾನದಲ್ಲಿ ಕುಳಿತು ಆಕಾಶದಲ್ಲಿ ಹಾರಾಡುವಂತೆ ಕಂಡಿತು.

"ಓದಿದೆಯಾ? ಬರುವುದಾದರೆ ಬಾ. ನಾನೀಗಲೇ ಹೊರಟೆ" ಎಂದು ಕೇಳಿದನು ದಾನಾನಾಥ.

"ನೀವು ಹೋಗಿರಿ. ನಾನು ಬರುವುದಿಲ್ಲ."

"ಪ್ರಪಂಚದಲ್ಲಿ ನನಗೆ ಜೀವದ ಗೆಳೆಯನಿರುವುದಾದರೆ ಇವನೊಬ್ಬನೇ ಎಂದು ತಿಳಿಯಿತು. ಆದರೆ ನಾನು ಇವನಿಗೆ ಅನ್ಯಾಯ ಮಾಡಿದೆ. ಇನ್ನು ನಿರ್ಮಲಾಂತಃಕರಣದಿಂದ ಕ್ಷಮೆ ಕೇಳುವೆನು."

"ಇಂದು ನೀವು ಹೋಗದಿರುವುದು ಮೇಲು."

"ಅದಾಗದು ಪ್ರೇಮಾ. ಅವನನ್ನಪ್ಪಿಕೊಳ್ಳಲು ಮನಸ್ಸು ತವಕಿಸುತ್ತದೆ" ಎನ್ನುತ್ತ ದಾನಾನಾಥನು ಹೊರಗೆ ನಡೆದನು.

ಸುಮಿತ್ರೆಯು ವೃದ್ಧಮಾತೆಯೊಡನೆ ಮಾತಾಡಲು ಒಳಗೆ ಹೋದಳು. ಪ್ರೇಮಕುಮಾರಿಯು ಆ ಪತ್ರವನ್ನು ಇನ್ನೊಮ್ಮೆ ಓದಿದಳು. ಆ ಮೇಲೆ ಮಂಚದಲ್ಲಿ ಬಿದ್ದುಕೊಂಡಳು. ಆ ಪತ್ರದ ಪ್ರತಿಯೊಂದು ಶಬ್ದವೂ ಅವಳ ಕಣ್ಣಮುಂದೆ ಕುಣಿಯುತ್ತಿತ್ತು. ಅವಳು ಆಶಿಸಿದ ಕಲ್ಪನೆಗಳು ಮನಸ್ಸಿನಲ್ಲಿ ಬರತೊಡಗಿದುವು. ಕ್ರಮೇಣ ಅವಳ ಭಾವಗಳು ವಿಚಿತ್ರರೂಪ ಧಾರಣ ಮಾಡಿದುವು. ಕೊನೆಗವಳು ಪತ್ರವನ್ನು ಹರಿದು ಕಿಟಿಕಿಯ ಮೂಲಕ ಹೊರಗೆಸೆದಳು.

---

ದಾನಾನಾಥನು ಅಮೃತರಾಯನ ಬಂಗಲೆಯನ್ನು ಸಮೀಪಿಸಿದ
ದಾಗ ಅವನ ಹೃದಯವು ಅಳುಕಿತು. ಅಮೃತರಾಯನು ಮನಸ್ಸಿ
ಏನೆಂದುಕೊಂಡಾನೋ? ನಾಲ್ದೆಸೆಗಳಿಂದ ಕೆಟ್ಟ ಮಾತುಗಳನ್ನು ಹೇ
ಕೊಂಡು, ಸ್ನೇಹಿತರೆಲ್ಲ ತೊರೆದ ಬಳಿಕ ತನ್ನ ಬಳಿಗೆ ಬಂದನೆಂದು ಹ
ಕೊಳ್ಳನೆ? ಹೀಗೆ ಯೋಚಿಸುತ್ತಾ ನಿಂತಿದ್ದಾಗ, ವೃದ್ಧ ಸೇವಕನು ಹ
ಬಂದನು. ಈತನನ್ನು ಕಂಡು ನಮಸ್ಕರಿಸಿ, "ಬನ್ನಿರಿ, ಒಳಗೆ ಬನ್ನಿ
ರಾಯರು ತಮ್ಮ ನಿರೀಕ್ಷೆಯಲ್ಲೇ ಇರುವರು" ಎಂದು ಹೇಳಿ ಮುಂದಿನಿ
ಒಳಗೆ ಹೋದನು. ಹಿಂದಿನಿಂದ ದಾನಾನಾಥನೂ ಅನುಸರಿಸಿದನು. ಅವ
ಜಗಲಿಗೆ ಮುಟ್ಟಿದರೆನ್ನುವಾಗ, ಅಮೃತರಾಯನು ಬಂದು ಆತುರದಿ
ದಾನಾನಾಥನನ್ನಪ್ಪಿಕೊಂಡನು.

ದಾನಾನಾಥ– ನೀನು ನನ್ನ ಮೇಲೆ ಸಿಟ್ಟಾಗಿರುವೆಯಲ್ಲ?

ಅಮೃತರಾಯನು ಎಲ್ಲೋ ನೋಡುತ್ತಿದ್ದನು. ಆದರೂ "ಹೀಗೆ
ಬೇಡ ದಾನು; ಒಮ್ಮೆ ಸಿಟ್ಟು ಬಂದಿತ್ತು. ಒಮ್ಮೊಮ್ಮೆ ದಯೆಯೂ ಉಂಟಾ
ತ್ತಿತ್ತು. ಒಮ್ಮೆ ದುಃಖ, ಒಮ್ಮೆ ಆಶ್ಚರ್ಯ! ನನ್ನ ಮೇಲೆ ನೀನೂ ಸಿ
ಗೊಂಡಿದ್ದೆ. ಮನುಷ್ಯ ಹೃದಯವೆಷ್ಟು ಜಟಿಲವೆಂದು ಪಾಠ ಕಲಿತೆ. ನಿ
ಚರಿತ್ರೆಯಲ್ಲಿ ನನಗೆಂದೂ ಶಂಕೆಯುಂಟಾಗಿದ್ದಿಲ್ಲ. ದಿನದಿನವೂ ತರತ
ಮಾತುಗಳನ್ನು ಕೇಳುತ್ತಿದ್ದೆ. ಆದರೂ ನನ್ನ ಮನಸ್ಸು ವಿಚಲಿತವಾಗಿದ್ದಿ
..... ಅದೇಕೆ ನೀನು ರಜೆ ತೆಗೆದುಕೊಂಡೆ? ರಜೆಯನ್ನು 'ಕೇನ್ಸಲ
ಮಾಡಬಾರದೆ?" ಎಂದನು. ಈ ಮಾತಿಗೆ ಉತ್ತರ ಬರಲಿಲ್ಲ. "ನನ್ನನ
ಕ್ಷಮಿಸಿದೆನೆನ್ನಬಾರದೆ?" ಎಂದು ಮಾತ್ರ ದಾನಾನಾಥನೆಂದನು.

ಅಮೃತರಾಯ– ಸಂಪತ್ತು ದೊರೆತ ಮೇಲೆ ನೀಚನಾಗುವುದು ಸ್ವಾಭ
ವಿಕ. ಸ್ವಲ್ಪ ಹಣ ದೊರೆತಾಗಲೇ ತಮ್ಮನ್ನು ತಾವು ಮರೆಯುವರೆಂದ ಮೇ
ಪ್ರೇಮಕುಮಾರಿಯಂತಹ ಸಾಕ್ಷಾಲ್ಲಕ್ಷ್ಮೀದೇವಿಯನ್ನು ಪಡೆದು ನೀನಿನ
ದುಃಖಿತನಾಗಿರುವುದೇಕೆ?

ದಾನಾನಾಥ- ಇದೇ ನನ್ನ ಮೊದಲ ತಪ್ಪು. ನಾನವಳಿಗೆ ಯೋಗ್ಯನಲ್ಲ

ಅಮೃತರಾಯ– ಅವಳು ನಿನ್ನನ್ನು ದೂರುವುದಿಲ್ಲವಷ್ಟೆ?

ದಾನಾನಾಥ– ಹಾಗೇನೂ ಇಲ್ಲ. ಮದುವೆಯಾದ ಮೇಲೆ ಅದೇಕೆ
ನಾನು ಸಂದೇಹ ತಾಳಿದೆ. ಅವಳು ನನ್ನನ್ನು ಉಪೇಕ್ಷಿಸುವಳೋ ಎಂ

ಂಶಯು ಬರತೊಡಗಿತು. ನಿಜವಾಗಿಯೂ ಅವಳನ್ನು ಬೇಸರಪಡಿಸುವುದ
ಕ್ಕಾಗಿ ನಿನ್ನ ನಿಂದೆಯನ್ನು ಮಾಡತೊಡಗಿದೆ. ನನ್ನ ಮನಸ್ಸು ಯಾವಾ
ಲೂ ಅಶುದ್ಧವಾಗಿರುತ್ತಿತ್ತು.

ಅಮೃತರಾಯ— ಅದೇ ನಿನ್ನ ತಪ್ಪು. ನೀನೇಕೆ ಯಾವನಾದರೂ
ತುರನಲ್ಲಿ ಸಲಹೆಯನ್ನು ಕೇಳಲಿಲ್ಲ? ಅವಳನ್ನುರಿಸಬೇಕಾದರೆ ಹಾಗೆ
ಮಾಡಬೇಕಿತ್ತೆ? ದಿನವಿಡೀ ನನ್ನ ಬಳಿ ನೀನಿರುತ್ತಿದ್ದರೆ ಅವಳು ಬೇಸರ
ಗೊಳ್ಳುತ್ತಿದ್ದಳಷ್ಟೆ?

ದಾನಾನಾಥ— ನಿನ್ನ ಚಂದಾ ಹಣವನ್ನು ಕಡಮೆ ಮಾಡುವುದಕ್ಕಾಗಿ
ನಾನು ದೋಷವನ್ನಾರೋಪಿಸಿದೆ. ಆದರೆ ಅದೆಲ್ಲಾ ಸುಳ್ಳು.

ಅಮೃತರಾಯ— ನನಗೆ ಗೊತ್ತಿದೆ.

ದಾನಾನಾಥ— ನಿನ್ನ ಮೇಲೆ ನಾನೆಷ್ಟು ದೋಷಾರೋಪಣೆ ಮಾಡಿದೆ
ಎಂದರೆ . . . . . .

ಅಮೃತರಾಯ- ಸುಮ್ಮನಿರು. ಎಲ್ಲಾ ಗೊತ್ತಿದೆ. ನಡೆ. ಆಶ್ರಮ
ವನ್ನು ನೋಡಿಕೊಂಡು ಬರೋಣ.

ದಾನಾನಾಥ— ಹೋಗೋಣ. ಮೊದಲು ನೀನು ನನ್ನ ಕ್ಷಮಿಸು.
ಆ ಮೇಲೆ ಹೊರಡೋಣ.

ಅಮೃತರಾಯ— ಈಗಲ್ಲ. ಮೊದಲು ನಡೆ; ಆ ಮೇಲೆ. ವಿಮರ್ಶಾ
ದೃಷ್ಟಿಯಿಂದ ಎಲ್ಲವನ್ನೂ ನೋಡು. ಎಲ್ಲಾದರೂ ನಿನಗೆ ಅಪಸ್ವರವು ಕೇಳಿ
ದರೆ, ಕೂಡಲೇ ನನಗೆ ತಿಳಿಸಬೇಕು.

ದಾನಾನಾಥ— ಪೂರ್ಣೆಯು ಇಲ್ಲಿಗೆ ಬಂದಿರುವಳಲ್ಲ? ಅವಳೇನಾದರೂ
ನ ವಿಷಯ ಹೇಳಿರುವಳೆ?

ಅಮೃತರಾಯ— ಅದೇನೂ ಕೇಳಬೇಡ. ವಿಚಿತ್ರ ಸ್ವಭಾವದವಳವಳು.
ಬಂದು ಇಷ್ಟು ದಿವಸಗಳಾದರೂ ಇನ್ನೂ ಉದಾಸೀನಳಾಗಿರುವಳು. ತನ್ನ
ಕೋಣೆಯಿಂದ ಹೊರಡುವುದೇ ಇಲ್ಲ. ಸ್ತ್ರೀಯರೊಡನೆಯೂ ಮಾತಾಡು
ವುದಿಲ್ಲ. ನಿನಗವಳ ಪರಿಚಯವಿದೆಯೆ?

ದಾನಾನಾಥ— ಒಂದೆರಡು ಬಾರಿ ಪ್ರೇಮಕುಮಾರಿಯೊಡನಿದ್ದುದನ್ನು
ನೋಡಿದ್ದೆ.

ಅಮೃತರಾಯ— ಅವಳನ್ನೆಲ್ಲಿಯಾದರೂ ಸಮಾಧಾನಪಡಿಸಬೇಕಾದರೆ
ಪ್ರೇಮಕುಮಾರಿಯೇ ಆಗಬೇಕು. ಅವಳಿಗೆ ಮದುವೆಯಾಗುವ ಇಚ್ಛೆ
ಯಿರುವುದಾದರೆ, ಶ್ರೀಮಂತ ವರರು ದೊರಕಿಯಾರು. ಒಬ್ಬಿಬ್ಬರು ನನ್ನೊಡನೆ

ಪ್ರಸ್ತಾಪಿಸಿದ್ದೂ ಇದೆ. ಆದರೆ ಅವಳೊಡನೆ ಹೇಳುವವರಾರು? ಪ್ರೇವ
ಕುಮಾರಿಯೇ ಆಗಬೇಕು. ಏಕಾಂಗಿನಿಯಾಗಿರುವೆನೆಂದು ನಿರ್ಧರಿಸಿರದಿದ್ದ
ಅವಳೂ ಜಾತಿನೀತಿಯನ್ನು ತೊರೆಯಲು ಸಿದ್ಧಳಿರುತ್ತಿದ್ದರೆ, ನಾನೇ ಒ
ಉಮೇದುವಾರನಾಗುತ್ತಿದ್ದೆ.

ದಾನಾನಾಥ- ಅವಳು ಸುಂದರಿಯೆನ್ನುವುದಲ್ಲ ಸಂದೇಹವಿಲ್ಲ ತಾನ

ಅಮೃತರಾಯ- ಇಂತಹ ಸುಂದರಿಯನ್ನು ನಾನೆಲ್ಲೂ ಕಂಡಿಲ್ಲ.

ದಾನಾನಾಥ- ಬಿಡು. ಮತ್ತೇಕೆ ನೀನು ವಿವಾಹವಾಗಕೂಡದು
ಏಕಾಂಗಿಯಾಗಿರುವ ಹಂಬಲವನ್ನು ದೂರ ಮಾಡು. ವೈವಾಹಿಕ ಜೀವ
ದಿಂದ ಸಾರ್ವಜನಿಕ ಕಾರ್ಯಕ್ಕೇನೂ ತೊಡಕಿಲ್ಲವಷ್ಟೆ?

ಅಮೃತರಾಯ- ಮೊದಲು ನೀನು ಬ್ರಹ್ಮಚರ್ಯದ ದಾರಿಯನ್ನು ಹಿ
ದಿದ್ದೆ. ಈಗ ವಿವಾಹದ ವಕೀಲನಾಗಿರುವೆ. ಈಗ ಪ್ರೇಮಕುಮಾರಿಯಿಂ
ವೈವಾಹಿಕ ಜೀವನದ ಮಾಧುರ್ಯವನ್ನೀಂಟಿದೆಯೆನ್ನು.

ದಾನಾನಾಥ- ನಾನೆಂದೂ ಅವಿವಾಹಿತ ಜೀವನವನ್ನು ಆದರ್ಶವ
ಗಿಟ್ಟುಕೊಂಡಿದ್ದಿಲ್ಲ. ಆದರ್ಶವಾಗುವುದಾದರೂ ಹೇಗೆ? ಅಸ್ವಾಭಾವಿಕ
ಮೇಲ್ಪಂಕ್ತಿಯಾದೀತೆ?

ಅಮೃತರಾಯ- ನಿಜ. ನೀನಿಂದಿಲ್ಲಿ ನಿಲ್ಲಬೇಕು. ಊಟವು ಸಿ
ವಾಗುತ್ತದೆ. ಭೋಜನಾನಂತರ ಸ್ವಲ್ಪ ವಿಶ್ರಮಿಸಿ, ಸಂಜೆ ನದೀತೀರ
ಸೊಬಗನ್ನು ಸವಿಯೋಣ.

ಮಿತ್ರರಿಬ್ಬರೂ ಆಶ್ರಮವನ್ನು ನೋಡಲು ಹೊರಟರು. ಅಮೃ
ರಾಯನು ನದೀತೀರದಲ್ಲೇ ಐವತ್ತು ಎಕ್ರೆ ಜಮೀನನ್ನು ಪಡೆದುಕೊಂಡಿದ್ದನ
ತನ್ನ ಸ್ವಂತ ಮನೆಯನ್ನು ಮಾರಿ, ಇಲ್ಲಿಯೇ ತನಗಾಗಿ ಒಂದು ಸಣ್ಣ ಮ
ಯನ್ನು ಕಟ್ಟಿಸಿದ್ದನು. ಆಶ್ರಮದ್ವಾರದ ಇಕ್ಕಡೆಗಳಲ್ಲಿ ಎರಡು ಕೋ
ಗಳಿದ್ದುವು. ಒಂದು ಆಶ್ರಮದ ಆಫೀಸು; ಇನ್ನೊಂದು ಆಶ್ರಮದ
ತಯಾರಿಸಲ್ಪಟ್ಟ ವಸ್ತುಗಳ ಪ್ರದರ್ಶನಾಲಯ. ಆಫೀಸಿನಲ್ಲಿ ಅರೆಮುದು
ಯೊಬ್ಬಳು ಕುಳಿತು ಬರೆಯುತ್ತಿದ್ದಳು. ಈಚೆಯ ಕೋಣೆಯಲ್ಲಿ ಕಸೂ
ಕೆಲಸಗಳ ವಸ್ತುಗಳಿದ್ದುವು. ಅಲ್ಲಲ್ಲಿ ಗೋಡೆಯಲ್ಲಿ ಸ್ತ್ರೀಯರು ಮಾಡಿ
ಚಿತ್ರಗಳು ತೂಗುತ್ತಿದ್ದುವು. ಕಪಾಟಿನಲ್ಲಿ ಆಟದ ವಸ್ತುಗಳಿದ್ದುವ
ಇನ್ನೊಂದು ಕಪಾಟಿನೊಳಗೆ ಆಶ್ರಮದಲ್ಲಿ ತಯಾರಿಸಿದ ಮಿಠಾಯಿಗಳಿದ್ದುವ
ಇಬ್ಬರು ಮಹಿಳೆಯರು ಇವುಗಳನ್ನು ಮಾರಲು ನಿಂತಿದ್ದರು. ದಿನ
ವ್ಯಾಪಾರವು ನೂರು ರೂಪಾಯಿಗಳಿಗೂ ಮೀರುತ್ತಿತ್ತು.

ಇಬ್ಬರೂ ಮುಂದೆ ಹೋದರು. ಒಂದು ಉದ್ದದ ಹಾಲಿನಲ್ಲಿ ಪ್ರತಿಯೊಬ್ಬರೂ ಅವರವರಿಗೆ ಮೆಚ್ಚುವ ಕೆಲಸಗಳನ್ನು ಮಾಡುತ್ತಿದ್ದರು. ಕೆಲವರು ಹೊಸಬರಿಗೆ ಕಲಿಸುತ್ತಿದ್ದರು.

ದಾನಾನಾಥ– ಇಂತಹ ದಕ್ಷ ಸ್ತ್ರೀಯರೆಲ್ಲಿ ದೊರೆತರು?

ಅಮೃತರಾಯ– ಕೆಲವರನ್ನು ಬೇರೆ ಕಡೆಯಿಂದ ಕರೆಸಿದೆ. ಕೆಲವರು ಇಲ್ಲಿಯವರೇ! ತಮಗೆ ತಿಳಿದ ಕೆಲಸಗಳನ್ನು ಕಲಿಸಿ ಹೋಗುತ್ತಿರುವರು. ಚಿತ್ರಕಲೆಯನ್ನು ಜಡ್ಜರ ಪತ್ನಿ ಕಲಿಸುವರು. ಮಿಸೆಸ್. ಸಕ್ಸೇನಾ ಹೊಲಿಗೆಯಲ್ಲಿ ನಿಪುಣೆ. ಮೂವರು ಸ್ತ್ರೀಯರು ಪಾಠಶಾಲೆಯಲ್ಲಿ ಕೆಲಸ ಮಾಡುವರು. ಈ ಕುಲಸ್ತ್ರೀಯರೆಲ್ಲರೂ ಇಲ್ಲಿಗೆ ಬರುವರೋ ಎಂಬ ಸಂದೇಹವು ಮೊದಲು ನನಗಿತ್ತು. ಆದರೆ ಈಗ ಆ ಸಂಶಯವು ದೂರವಾಗಿದೆ. ಇದರೊಳಗೆ ಘೋಷೆಯ ಮಾತೇ ಇಲ್ಲ. ತೋಟವನ್ನು ನೋಡೋಣ, ನಡೆ. ತೋಟದೊಡತಿಯು ಪೂರ್ಣೆಯಾಗಿದ್ದಾಳೆ.

ತೋಟವು ದೊಡ್ಡದಾಗಿದ್ದಿಲ್ಲ. ಫಲವೃಕ್ಷಗಳು, ಪುಷ್ಪಗುಚ್ಛಗಳು ಅಲ್ಲಲ್ಲಿದ್ದುವು. ಮಧ್ಯದಲ್ಲೊಂದು ಕೊಳ. ಅದರಿಂದ ನಾಲ್ಕಾರು ಹುಡುಗಿಯರು ಗಿಡಗಳಿಗೆ ನೀರೆರೆಯುತ್ತಿದ್ದರು. ಕೊಳದ ಸುತ್ತಲೂ ಲತಾಮಂಟಪಗಳು. ಅಲ್ಲಲ್ಲಿ ಶಿಲಾಸನಗಳು. ಇವುಗಳಲ್ಲೊಂದರ ಮೇಲೆ ಪೂರ್ಣೆಯು ಕುಳಿತು ಪುಷ್ಪಹಾರವೊಂದನ್ನು ತಯಾರಿಸುತ್ತಿದ್ದಳು. ಯಾರಿಗಾಗಿರಬಹುದು .....? ಯಾರಿಗೆ ಗೊತ್ತು!

ಈ ಮಿತ್ರರಿಬ್ಬರನ್ನು ಕಂಡು ಪೂರ್ಣೆಯು ಎದ್ದುನಿಂತಳು. ಹಾರವು ಆಸನದಲ್ಲೇ ಉಳಿಯಿತು.

ಅಮೃತರಾಯ– ಪೂರ್ಣಾ, ಇವರು ನಿನ್ನನ್ನು ಕಾಣಲು ಬಂದಿರುವರು.

ಪೂರ್ಣಾ– ಪ್ರೇಮಾ ಹೇಗಿರುವಳು? ನನ್ನನ್ನು ಮರೆತಳೋ ಎಂದು ಕೇಳಿದೆನೆನ್ನಿರಿ.

ದಾನಾನಾಥ– ಅವಳು ನಿನ್ನನ್ನು ಕಾಣಬೇಕೆಂದಿರುವಳು. ಆದರೆ ಅದೇನೋ ಸಂಕೋಚ .... ಹಾರವು ಸುಂದರವಾಗಿದೆ.

ನೀರೆರೆಯುತ್ತಿದ್ದ ಹುಡುಗಿಯರು ಬಂದು ನಿಂತಿದ್ದರು. ಅವರಲ್ಲೊಬ್ಬಳು "ದೇವಿಯವರು ಆ ಪೇರಳೆಯ ಮರದಡಿಯಲ್ಲಿ ಒಂದು ಮಂದಿರವನ್ನು ರಚಿಸಿರುವರು. ಕಾಣಬೇಕಾದರೆ ಬನ್ನಿರಿ" ಎಂದಳು.

ಪೂರ್ಣಾ– ಎಲ್ಲಾ ಸುಳ್ಳು. ಎಲ್ಲಿದೆ ಮಂದಿರ?

ಬಾಲಿಕೆ– ಮಾಡಿರುವರು. ದಿನಾಲೂ ಅದರಲ್ಲಿ ಸ್ಥಾಪಿಸಿರುವ ಮೂರ್ತಿಗೆ ಹಾರವನ್ನು ತೊಡಿಸುವರು.

ಅಮೃತರಾಯನನ್ನು ಬಾಲಿಕೆಯು ಕೈಹಿಡಿದು ಕರೆದುಕೊಂಡೇ ಹೋದಳು. ಅವನ ಹಿಂದೆ ದಾನಾನಾಥ. ಬಾಲಿಕೆಯರೆಲ್ಲರ ಹಿಂದೆ ಪೂರ್ಣಾ.

ತೋಟದ ಒಂದು ಕೊನೆಯಲ್ಲಿ ಒಂದು ಹಳೆಯ ಮರವಿತ್ತು. ಅದರಡಿಯಲ್ಲಿಯೇ ಸಣ್ಣದೊಂದು ಹೂದೋಟ, ಚೆನ್ನಾಗಿ ಶೃಂಗರಿಸಲ್ಪಟ್ಟಿತ್ತು. ಅದರ ನಡುವಿನಲ್ಲೊಂದು ದಿನ್ನೆ. ಅದು ಸಿಂಹಾಸನದಂತಿದೆ. ಅದರಲ್ಲಿ ಕೃಷ್ಣನ ಮೂರ್ತಿಯೊಂದನ್ನು ಇರಿಸಿದೆ. ಅಲ್ಲೇ ಎಷ್ಟೋ ಹಾರಗಳು ಒಣಗಿ ಬಿದ್ದಿವೆ. ಇದನ್ನು ನೋಡಿದ ಗೆಳೆಯರಿಬ್ಬರೂ ಬೆರಗಾದರು.

ಅಮೃತರಾಯರ ಕೊರಳ ಸೆರೆ ಬಿಗಿಯಿತು. ಅವನು "ಪೂರ್ಣಾ, ನಮಗೂ ಇಂದು ಭಕ್ತಿಯ ಪಾಠವನ್ನು ಕಲಿಸಿದೆ. ನಾವೂ ದಿನನಿತ್ಯ ಪೂಜಾ ಕಾಲಕ್ಕೆ ಇಲ್ಲಿಗೆ ಬರುವೆವು. ಆ ಸಮಯವಾವುದು?" ಎಂದನು. ಪೂರ್ಣೆಯ ಮುಖವು ಅವರ್ಣನೀಯ ಶೋಭೆಯಿಂದ ಬೆಳಗಿತು. ಅವಳ ಕಣ್ಣುಗಳು ಅಗಾಧ ಶಾಂತಿಯಿಂದ ಕಳೆಗೂಡಿದುವು. "ನಾನು ಪೂಜಿಸುವುದಕ್ಕೆ ನಿರ್ದಿಷ್ಟ ಸಮಯವೇನೂ ಇಲ್ಲ. ಹೃದಯವು ವಿಹ್ವಲವಾದಾಗ, ಇಲ್ಲಿಗೆ ಬಂದು ಗೋವಿಂದನ ಚರಣತಲದಲ್ಲಿ ಅಳುತ್ತಾ ಕುಳಿತುಕೊಳ್ಳುವೆನು. ಇಲ್ಲಿಗೆ ಬಂದಾಗ ನನಗೆ ದೊರಕುವ ಆನಂದವನ್ನು ವಿವರಿಸಲು ನನಗರಿಯದು. ಸ್ವತಃ ಗೋವಿಂದನೇ ಕಣ್ಣೀರನ್ನೊರಸುವನೋ ಎನಿಸುತ್ತದೆ. ನನ್ನ ಸುತ್ತಲೂ ಅಲೌಕಿಕ ಪ್ರಕಾಶವು ಪಸರಿಸಿದಂತಾಗುತ್ತದೆ . . . . . ಪ್ರೇಮಾ ಎಂದು ಬಂದಾಳು? ಅವಳನ್ನು ನೋಡಲು ಉತ್ಸುಕಳಾಗಿರುವೆನೆಂದು ತಿಳಿಸಿರಿ.

ದಾನಾನಾಥನು "ಅವಳನ್ನು ನಾಳೆ ಕಳುಹಿಸುವೆನೆ"ಂದು ಆಶ್ವಾಸನೆ ಕೊಟ್ಟು ಗಂಟೆಯನ್ನು ನೋಡಿದನು. "ಅರೆ! ಇಷ್ಟು ಬೇಗನೆ ಮೂರು ಗಂಟೆಯಾಯಿತು!" ಎಂದನು.

ಅಮೃತರಾಯ– ನನಗೂ ನೆನಪಾಗಲಿಲ್ಲ, ಇನ್ನೂ ಊಟವಾಗಿಲ್ಲ.

ದಾನಾನಾಥ– ಇನ್ನಾದರೂ ಹೋಗೋಣ.

ಅಮೃತರಾಯ– ಅಡಿಗೆಯವನೂ ಹೇಳಲಿಲ್ಲ.

ಭೋಜನವನ್ನು ತೀರಿಸಿ ಆಶ್ರಮದ ಸಂಬಂಧ ಅನೇಕ ಮಾತಾಡಿದರು. ಸಂಜೆಯ ಹೊತ್ತು ಗಂಗಾತಟಕ್ಕೆ ನಡೆದರು. ಸಂಧ್ಯಾಸಮೀರನು ಮಂದ ಗತಿಯಲ್ಲಿದ್ದನು. ಕ್ರೀಡಾನೌಕೆಗಳು ತರಂಗಗಳ ಮೇಲೆ ಕುಣಿಕುಣಿದು ಅತ್ತಿತ್ತ ಹೋಗುತ್ತಿದ್ದುವು. ಗಂಗಾದೇವಿಯು ಮಂಜುಳಸ್ವರದಿಂದ ಹಾಡಿ,

ದಿನವಿಡೀ ಬಳಲಿದ ಜೀವಿಗಳನ್ನು ಸಂತೈಸುತ್ತಿದ್ದಳು. ಆಶ್ರಮದ ವಿಶಾಲ ಭವನವು ಸೂರ್ಯದೇವನ ಆಶೀರ್ವಾದವನ್ನು ಸ್ವೀಕರಿಸುತ್ತಾ ಇತ್ತು. ಇಬ್ಬರು ಮಿತ್ರರೂ ಪುಳಿನ ಸ್ಥಳದಲ್ಲಿ ಕುಳಿತರು.

"ನಿನ್ನ ಕೊನೆಯ ನಿರ್ಧಾರವೇನು?" ಎಂದು ದಾನಾನಾಥನು ಮಾತಿಗಾರಂಭಿಸಿದನು.

"ಯಾವ ವಿಷಯದಲ್ಲಿ?"

"ಮದುವೆಯ ವಿಷಯದಲ್ಲಿ."

"ನನ್ನ ವಿವಾಹದ ಚಿಂತೆ ನಿನಗೇಕೆ?"

"ಆಗಲಿ. ನಿನ್ನ ಪ್ರತಿಜ್ಞೆಯನ್ನಾದರೂ ಪೂರೈಸುವುದಿಲ್ಲವೆ?"

"ಪೂರೈಸಿದೆನಲ್ಲ?"

"ಸುಳ್ಳು."

"ನಿಜ."

"ಸುಳ್ಳು . . . . ನೀನು ವಿವಾಹವಾದುದೆಂದು?"

"ಆಗಿ ಮುಗಿದಿದೆಯಲ್ಲ?"

"ಯಾರನ್ನಾದರೂ ಮನೆಯಲ್ಲಿ ತಂದಿಟ್ಟಿರುವೆಯೇನು?"

"ಹಾಗಲ್ಲ. ಊರಿಡೀ ಡಂಗುರ ಸಾರಿ ಮದುವೆಯಾದುದು. ಸ್ತ್ರೀಯೆಂದರೆ ಪ್ರಪಂಚವೇ ಮೋಹಿಸುವಂತಹಳು."

"ಆಗಲಿ. ಅಪ್ಸರೆಯೇ?"

"ಅಪ್ಸರೆಗಿಂತಲೂ ಮಿಗಿಲಾದವಳು."

"ನನ್ನ ಕೈಯ ಮೇಲೆ ಕೈತಟ್ಟು."

"ನನ್ನ ಮಾತನ್ನು ನೀನು ನಂಬದಿದ್ದರೆ ನಾನೇನು ಮಾಡಲಿ? ನನ್ನ ವಿವಾಹವಾಗಿದೆ."

"ಎಲ್ಲಿ?"

"ಇಲ್ಲಿಯೇ."

"ಅಂದರೆ ಅವಳೆಲ್ಲಿರುವಳು? ನಿನ್ನ ಹೃದಯದಲ್ಲಿಯೆ?"

"ನನ್ನ ನಿನ್ನ ಮತ್ತು ಪ್ರಪಂಚದ ಇದಿರಲ್ಲಿ."

"ನಾನು ನೋಡಿಲ್ಲ?"

"ಈಗ ನಾವಿಬ್ಬರೂ ನೋಡಿಯೇ ಬಂದೆವಲ್ಲ?"

"ಯಾರು? ಪೂರ್ಣೆಯೇ?"

"ಅವಳು ನನ್ನ ತಂಗಿಯಷ್ಟೆ?"

"ಹಾಗಾದರೆ ಬೇರೆ ಯಾರು?"

"ಎಷ್ಟೋ ಹೊತ್ತು ತೋರಿಸಿದೆ. ಇನ್ನೂ ಹೇಗೆ ತೋರಿಸುವ
ಈಗಲೂ ನೀನು ಕಾಣುತ್ತಿರುವೆ. ಅಲ್ಲಿ ನೋಡು. ಅಂತಹ ಸುಂದರಿಯ
ನೀನೆಲ್ಲಿಯಾದರೂ ಕಂಡಿರುವೆಯಾ?"

"ಈಗ ತಿಳಿಯಿತು."

"ಇವಳೊಡನೆ ನನ್ನ ಜೀವನವು ಸುಖಮಯವಾಗಿ ಸಾಗದೆ?"

ದಾನಾನಾಥನು ಗಂಭೀರಭಾವದಿಂದ ಮಾತಾಡಿದನು; "ಈ
ನೀನು ನಿನ್ನ ಪಣವನ್ನು ಪೂರೈಸುವುದಾಗಿದ್ದರೆ, ನಾನು ಪ್ರೇಮಕುಮ
ಯನ್ನು ವಿವಾಹವಾಗುತ್ತಿದ್ದಿಲ್ಲ."

"ನಾನು ಪ್ರೇಮಕುಮಾರಿಯ ಉಪಾಸನೆಯನ್ನು ತ್ಯಜಿಸಿದಾ
ನೀವೆಲ್ಲರೂ ತಿಳಿಯಬೇಕಿತ್ತು. ಪ್ರೇಮಕುಮಾರಿಗಂತೂ ನನ್ನ ಮ
ತಿಳಿದುಹೋಗಿತ್ತು."

ಪೃಥ್ವಿಯು ಶ್ಯಾಮವರ್ಣವನ್ನು ಧರಿಸಿತ್ತು. ದಾನಾನಾಥನು ನಿ
ನಾಗಿ ಕುಳಿತಿದ್ದನು. ಅಮೃತರಾಯನ ಹೃದಯದಲ್ಲಿ ಮಾತ್ರ ಒಮ್ಮೆ ಬ
ಬಿರುಗಾಳಿಯೆದ್ದು ಶಾಂತವಾಯಿತು.

ಫಕ್ಕನೆ "ನೀನು ನನಗೆ ಮೋಸಮಾಡಿದೆ!" ಎಂಬೊಂದು ಉದಾ
ದಾನಾನಾಥನ ಬಾಯಿಯಿಂದ ಹೊರಬಿದ್ದಿತು.

---

Printed at the Sharada Press, Mangalore—P. I. C. S. K. 22

